ವಸಂತ ಮಾಲಿಕೆ—ಮಂಗಳೂರು

ಕನ್ನಡ ನಾಡಿನ ಉತ್ತಮ ಬರೆಹಗಾರರ ಕೃತಿಗಳನ್ನು
ಪ್ರಕಟಿಸಲಾಗುವುದು

**ಇಂದೇ ಚಂದಾದಾರರಾಗಿ ಪ್ರೋತ್ಸಾಹಿಸಿರಿ !**

ಹೆಚ್ಚಿನ ವಿವರಗಳಿಗೆ
**ವ್ಯವಸ್ಥಾಪಕರು, 'ವಸಂತ ಮಾಲಿಕೆ'**
ಕೊಡಿಯಾಲಬೈಲು, ಮಂಗಳೂರು.

ನಮ್ಮ ಬಿಡಿ ಪ್ರತಿಗಳ ಮಾರಾಟಗಾರರು
**ದಿ ಇಂಡಿಯನ್ ಇಂಡಸ್ಟ್ರಿಯಲ್ಸ್ ಎಂಡ್ ಏಜನ್ಸೀಸ್,**
ಕಾರ್ನಾಡು ಸದಾಶಿವರಾಯರ ರಸ್ತೆ,
ಮಂಗಳೂರು.

ವಸಂತ ಮಾಲಿಕೆಯ ಮೊದಲನೆಯ ಬಿಡಿ ಹೂ

ಕವಿರತ್ನ ಕಾಳಿದಾಸ ಕೃತ

## ಅಭಿಜ್ಞಾನ ಶಾಕುಂತಲ ನಾಟಕದ

# ವಿಮರ್ಶೆ

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಪ್ರಾಧ್ಯಾಪಕರಾಗಿದ್ದ
ದಿವಂಗತ **ಶ್ರೀ। ಬಿ. ಕೃಷ್ಣಪ್ಪ**, ಎಂ. ಎ.,
ಅವರಿಂದ

ರೂ. ೧-೪-೦] [೧೯೪೮

ಪ್ರಕಾಶಕರು
**'ವಸಂತ ಮಾಲಿಕೆ'**
ವಸಂತಪ್ರೇಮಿ ಮಂಡಲಿ, ಮಂಗಳೂರು

**Printed at the Rashtra Bandhu Press, Mangalore.**

# ಪ್ರಸ್ತಾವ

ವಸಂತಮಾಲಿಕೆಯ ಬಿಡಿಹೂವನ್ನಾಗಿ ಈ ಪುಸ್ತಕವನ್ನು ನಿಮ್ಮ ಮುಂದಿರಿಸಿದ್ದೇವೆ. ತಮ್ಮೆಲ್ಲರ ಪ್ರೋತ್ಸಾಹವು ಚೆನ್ನಾಗಿ ದೊರೆತಲ್ಲಿ ಇನ್ನೂ ಕೆಲವು ಪುಸ್ತಕಗಳನ್ನು ಪ್ರಕಟಿಸಬೇಕೆಂದಿದ್ದೇವೆ. ಮಾಲಿಕೆಯ ಚಂದಾದಾರರಿಗೆ ಈ ಬಿಡಿಹೂಗಳನ್ನು ಅರ್ಧಬೆಲೆಗೆ ಕೊಡಲಾಗುವುದೆಂದು ತಿಳಿಸಲು ಸಂತೋಷಪಡುತ್ತೇವೆ.

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಪ್ರಾಧ್ಯಾಪಕರಾಗಿದ್ದ ದಿವಂಗತ ಶ್ರೀ। ಬಿ. ಕೃಷ್ಣಪ್ಪ, ಎಂ. ಎ., ಇವರ ವಿಮರ್ಶೆ ಸಹಿತವಾದ ಅಭಿಜ್ಞಾನ ಶಾಕುಂತಲ ನಾಟಕದ ಕರ್ಣಾಟಕ ಗದ್ಯಾನುವಾದವು ೧೯೨೨ ರಲ್ಲಿ ಕರ್ಣಾಟಕ ಗ್ರಂಥಮಾಲೆಯ ೧೦೧ನೆಯ ಕುಸುಮವಾಗಿ ಪ್ರಕಟವಾಗಿದ್ದಿತು. ಆದರೆ ಈಗ ಅದರ ಪ್ರತಿಗಳು ಸಿಗದಿದ್ದುದರಿಂದಲೂ, ಅನೇಕರಿಗೆ—ವಿಶೇಷವಾಗಿ ಶಾಕುಂತಲ ನಾಟಕಾಭ್ಯಾಸಿಗಳಿಗೆ—ಅದರ ಉಪಯೋಗವು ಬಹಳವಾಗಿದ್ದುದರಿಂದಲೂ, ನಾವು ಆ ಪುಸ್ತಕದ ವಿಮರ್ಶೆಯ ಭಾಗವನ್ನು ಮಾತ್ರ ಪ್ರಕಟಿಸಿದ್ದೇವೆ. ಅನುಕೂಲವಾದಲ್ಲಿ ಗದ್ಯಾನುವಾದವನ್ನೂ ಪ್ರಕಟಿಸುವ ಯೋಚನೆಯಿದೆ.

ಬಿ. ಕೃಷ್ಣಪ್ಪನವರ ಪುತ್ರರೆಲ್ಲರೂ ನಮ್ಮ ಮಾಲಿಕೆಯ ಹಿತೈಷಿಗಳು. ಅವರು ಈ ಪುಸ್ತಕದ ಪುನರ್ಮುದ್ರಣಕ್ಕೆ ಪ್ರೇಮದಿಂದ ಅನುಮತಿಯನ್ನಿತ್ತಿದ್ದಾರೆ. ಅದಕ್ಕಾಗಿ ನಾವು ಅವರೆಲ್ಲರಿಗೆ ಚಿರಋಣಿಗಳು.

ಪುನರ್ಮುದ್ರಣದಲ್ಲಿ, ಓದುಗರ ಸೌಕರ್ಯಕ್ಕಾಗಿ ವಿಷಯಗಳನ್ನು ಅಧ್ಯಾಯಗಳನ್ನಾಗಿ ವಿಭಾಗಿಸಿದೆ. ಮೂಲಗ್ರಂಥದ ನಾಲ್ಕನೆಯ ಅಂಕದ ಶ್ಲೋಕಚತುಷ್ಟಯವನ್ನೂ ಶ್ರೀ। ಬಸವಪ್ಪ ಶಾಸ್ತ್ರಿಗಳ ಕನ್ನಡ ಅನುವಾದದೊಂದಿಗೆ ಸೇರಿಸಿದೆ.

ಕೊನೆಯದಾಗಿ, ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ರಾಷ್ಟ್ರಬಂಧು ಮುದ್ರಣಾಲಯದ ವ್ಯವಸ್ಥಾಪಕರಿಗೆ ಧನ್ಯವಾದಗಳು.

ಬೆಸೆಂಟ್ ಶಾಲೆ<br>
೯—೧೦—೪೮<br>
(ಶಾರದಾಪೂಜೆ)

**ಶ್ರೀನಿವಾಸ ಉಡುಪ,**<br>
ಸಂಪಾದಕ,<br>
'ವಸಂತ ಮಾಲಿಕೆ'.

# ೧. ನಾಟಕದ ಪ್ರಶಸ್ತ್ಯ

ಶಾಕುಂತಲ ಎಂಬ ಹೆಸರನ್ನು ಕೇಳದಿರುವ ವಿದ್ಯಾವಂತರು ಅತಿ ವಿರಳ. ಶಾಕುಂತಲವನ್ನು ಕುರಿತು—"ಕಾವ್ಯೇಷು ನಾಟಕಂ ರಮ್ಯಂ ತತ್ರ ರಮ್ಯಾ ಶಕುಂತಲಾ" ಎಂದೂ; "ಯದಿ ಸ್ವರ್ಗಸುಖಂ ಭೂಮಾ ವಾತ್ಮನಾನೇನ ವಾಂಛಸಿ । ಭೂಯೋ ಭೂಯಃ ಸುಧಾಸ್ವಾದು ಶಾಕುಂತಲಮಿದಂ ಪಠ ॥" ಎಂದೂ; "ಕಾಳಿದಾಸಸ್ಯ ಸರ್ವಸ್ವಮಭಿಜ್ಞಾನ ಶಕುಂತಲಮ್" ಎಂದೂ; ಭರತಖಂಡದ ವಿದ್ವಾಂಸರು ಹೇಳುವುದನು ಅನೇಕರು ಕೇಳಿರಬಹುದು. ಭಿನ್ನ ಭಿನ್ನ ದೇಶಕಾಲಗಳಲ್ಲಿದ್ದ ಅಭಿರಾಮ ಭಟ್ಟ, ಕಾಟಯವೇಮ, ಕೃಷ್ಣನಾಥ ಪಂಚಾನನ, ಚಂದ್ರಶೇಖರ, ಪ್ರೇಮಚಂದ್ರ, ರಾಮಭದ್ರ, ಶಂಕರ, ಶ್ರೀನಿವಾಸ—ಎಂಬಿವರೇ ಮೊದಲಾದ ಮಹಾ ವಿದ್ವಾಂಸರುಗಳನೇಕರು ಈ ನಾಟಕಕ್ಕೆ ವ್ಯಾಖ್ಯಾನಗಳನ್ನು ವಿರಚಿಸಿರುವರು. ಭರತಖಂಡದ ಬೇರೆ ಬೇರೆ ಲಿಪಿಗಳಲ್ಲಿ ಈ ನಾಟಕದ ಮಾತೃಕೆಗಳು ಅನೇಕವಾಗಿ ದೊರೆತಿರುವುವು. ಇಷ್ಟು ಮಾತ್ರವಲ್ಲದೆ ಭರತಖಂಡದ ಮುಖ್ಯ ಮುಖ್ಯ ದೇಶಭಾಷೆಗಳಿಗೆಲ್ಲಾ ಈ ಉತ್ತಮವಾದ ದೃಶ್ಯಕಾವ್ಯವು ಪರಿವರ್ತಿತವಾಗಿರುವುದು.

ಭರತಖಂಡದಲ್ಲಿಯೇ ಹುಟ್ಟಿದ ಈ ಗ್ರಂಥದ ವಿಷಯದಲ್ಲಿ ಈ ದೇಶದ ವಿದ್ವಜ್ಜನರು ತೋರಿಸಿರುವ ಆದರದಲ್ಲಿ ಅತಿಶಯವೇನೆಂದು ಕೆಲವರಿಗೆ ತೋರಬಹುದು. ಅನ್ಯದೇಶದ ದೊಡ್ಡ ದೊಡ್ಡ ವಿದ್ವಾಂಸರುಗಳನೇಕರು ಈ ಕಾವ್ಯರತ್ನದ ಅನರ್ಘತೆಯನ್ನು ಕಂಡುಹಿಡಿದು ತಮ್ಮ ಆದರ ಸತ್ಕಾರಗಳನ್ನು ಬಗೆ ಬಗೆಯಾಗಿ ಪ್ರಕಟಿಸಿರುವರು. ಇದರ ಪ್ರಶಸ್ತಿಯು ಪಾಶ್ಚಾತ್ಯ ದೇಶಗಳಲ್ಲಿ ಹರಡಲು ಸರ್ ವಿಲಿಯಂ ಜೋನ್ಸ್ (Sir William Jones) ಎಂಬ ಆಂಗ್ಲೇಯಾಧಿಕಾರಿಯು ಕಾರಣನಾದನು. ಈತನು ೧೭೮೩ನೆಯ ಅಕ್ಟೋಬರಿನಲ್ಲಿ ಕಲ್ಕತ್ತದ ಸುಪ್ರೀಂ ಕೋರ್ಟಿನ ಸಹಾಯನ್ಯಾಯಾಧಿಪತಿಯಾಗಿ ಈ ದೇಶಕ್ಕೆ ಬಂದನು. ಈತನು ಸಂಸ್ಕೃತ ಭಾಷೆಯನ್ನು ಬಹಳ ಉತ್ಸಾಹದಿಂದ ಅಭ್ಯಾಸ ಮಾಡುತ್ತಿದ್ದ ಕಾಲದಲ್ಲಿ ಈತನಿಗೆ ಶಾಕುಂತಲ ನಾಟಕದ ಒಂದು ಪ್ರತಿ

ದೊರೆಯಿತು. ಇದರ ಸ್ವಾರಸ್ಯವನ್ನು ತಿಳಿದ ಬಳಿಕ, ತನಗೆ ಸಿಕ್ಕಿದ ಮತ್ತೆ ಕೆಲವು ಪ್ರತಿಗಳ ಸಹಾಯದಿಂದ ಇವನು ಈ ನಾಟಕವನ್ನು ೧೭೮೯ರಲ್ಲಿ ಆಂಗ್ಲ ಭಾಷೆಗೆ ಪರಿವರ್ತನ ಮಾಡಿದನು. ಫಾರ್‌ಸ್ಟರ್ (Forster) ಎಂಬಾತನು ಈ ನಾಟಕವನ್ನು ೧೭೯೧ರಲ್ಲಿ ಇಂಗ್ಲಿಷ್ ಭಾಷೆಯಿಂದ ಜರ್ಮನ್ ಭಾಷೆಗೂ, ಬಳಿಕ ಚೇಜಿ (Chezy) ಎಂಬಾತನು ಫ್ರೆಂಚ್ ಭಾಷೆಗೂ ಪರಿವರ್ತಿಸಿದರು.

ಜರ್ಮನಿಯ ಪ್ರಸಿದ್ಧ ಕವಿಯಾದ ಗೀಟೆ (Goethe) ಎಂಬಾತನು ಫಾರ್‌ಸ್ಟರಿನ ಪರಿವರ್ತನವನ್ನು ಓದಿ ಪರಮಾನಂದಭರಿತನಾಗಿ ೧೭೯೧ರಲ್ಲಿ "ವರ್ಷದ ಆದಿಯ ಪುಷ್ಪಮಂಜರಿಗಳ ಸೌರಭ ಸೌಂದರ್ಯಗಳೂ, ವರ್ಷಾಂತದ ಪರಿಪಕ್ವ ಫಲಗಳ ಸ್ವಾದುತೆಯೂ, ಸರ್ವೇಂದ್ರಿಯ ಪಾರವಶ್ಯವೂ ತೃಪ್ತಿಯೂ, ಸ್ವರ್ಗಮರ್ತ್ಯಲೋಕಗಳ ಸಾರವೂ ನಿನಗೆ ಬೇಕಾಗಿರುವಲ್ಲಿ 'ಶಾಕುಂತಲ' ಎಂಬ ಒಂದು ಹೆಸರನ್ನು ಮಾತ್ರ ಹೇಳುವೆನು. ಇದರಿಂದ ಎಲ್ಲವನ್ನೂ ಹೇಳಿದುದಾಯಿತು" ಎಂದು ಅಭಿಪ್ರಾಯವು ಬರುವಂತೆ ಪ್ರಶಂಸಿಸಿರುವನು. ಅಗಸ್ಟಸ್ ವಿಲಿಯಮ್ ವಾನ್ ಶ್ಲೆಜೆಲ್ (**Augustus** William von Schlegel) ಎಂಬ ಇನ್ನೊಬ್ಬ ಪಾಶ್ಚಾತ್ಯವಿದ್ವಾಂಸನು "ಎರಡು ಸಾವಿರ ವರುಷಗಳಿಗೆ ಹಿಂದಿನಿಂದಲೂ ಪ್ರಚಾರದಲ್ಲಿರುವ ಭಾರತೀಯ ನಾಟಕಗಳೊಳಗೆ ಮನೋಹರವಾದ ಶಾಕುಂತಲ ನಾಟಕವೊಂದೇ ನಮಗೆ ಈಚೆಗೆ ಗೊತ್ತಾಗಿರುವುದು. ಇದರಲ್ಲಿ ಅನ್ಯದೇಶದ ಋತುಧರ್ಮಾದಿಗಳನ್ನು ವರ್ಣಿಸಿದ್ದರೂ ನಮ್ಮ ನೂತನ ನಾಟಕಗಳನ್ನು ಬಹಳ ಮಟ್ಟಿಗೆ ಹೋಲುವುದು" ಎಂದು ಬರೆದಿಟ್ಟಿರುವನು. ಅಲೆಗ್ಝಾಂಡರ್ ವಾನ್ ಹಂಬೋಲ್ಟ್ (Alexander von Humboldt) ಎಂಬ ಮತ್ತೊಬ್ಬ ವಿದ್ವಾಂಸನು "ಶಾಕುಂತಲದ ಇಂಗ್ಲಿಷ್ ಜರ್ಮನ್ ಪರಿವರ್ತನಗಳು ಕಾಳಿದಾಸನ ವಿಷಯದಲ್ಲಿ ಅಪಾರವಾದ ಆಶ್ಚರ್ಯವನ್ನುಂಟುಮಾಡುತ್ತಿರುವುವು. ಈತನ ಭಾವಗಳ ಕೋಮಲ ವರ್ಣನದಿಂದಲೂ, ನಿರ್ಮಾಣಚಾತುರೀ ವಿಪುಲತೆಯಿಂದಲೂ, ಎಲ್ಲಾ ಜನಾಂಗಗಳ ಕವಿವರ್ಯರ ಶ್ರೇಣಿಯಲ್ಲಿ ಈತನಿಗೆ ಅಗ್ರಸ್ಥಾನವು ಸಲ್ಲುವುದು; ಪ್ರಣಯಿಜನಗಳ ಚಿತ್ತವೃತ್ತಿಯ

ಲ್ಲಿಯೂ, ಪ್ರಕೃತಿಯಲ್ಲಿಯೂ ಉಂಟಾಗುವ ಪರಿಣಾಮಗಳನ್ನು ವರ್ಣಿಸು ವುದರಲ್ಲಿ ಕಾಳಿದಾಸ ಮಹಾಕವಿಯು ಆದರ್ಶಪುರುಷನಾಗಿರುವನು"— ಇತ್ಯಾದಿಯಾಗಿ ವರ್ಣಿಸಿರುವನು.

ಹೋರೆಸ್ ವಿಲ್ಸನ್ (Horace Wilson) ಎಂಬ ಮತ್ತೊಬ್ಬ ಪ್ರಸಿದ್ಧ ಸಂಸ್ಕೃತಜ್ಞನು ಶಾಕುಂತಲವನ್ನು ಬಹಳವಾಗಿ ಕೊಂಡಾಡಿ ರುವನು. ಸರ್ ಮಾನಿಯರ್ ವಿಲಿಯಮ್ಸ್ (Sir Monier Williams) ಎಂಬ ಮಗುದೊಬ್ಬ ವಿದ್ವಾಂಸನು ಕಾಳಿದಾಸನ ಸರಸ ಕವಿತಾಧೋರಣೆ, ಅಪಾರಪ್ರತಿಭೆ, ಕಲ್ಪನಾಚಾತುರ್ಯ, ಮಾನವಸ್ವಭಾವ ಜ್ಞಾನ, ಅತಿಕೋಮಲಗೂಢಾಂತರ್ಭಾವವಿವರಣ— ಈ ವಿಶೇಷ ಗಳನ್ನು ಕಂಡು ಆತನನ್ನು "ಇಂಡಿಯದ ಷೇಕ್ಸ್‌ಪಿಯರ್" ಎಂದು ಕರೆದಿರುವನು. ಹೀಗೆಯೇ ಅನ್ಯದೇಶದ ಇನ್ನೂ ಹಲವರು ವಿದ್ವನ್ಮಣಿ ಗಳು ಕಾಳಿದಾಸನನ್ನು ಕೊಂಡಾಡಿರುವುದು ಮಾತ್ರವಲ್ಲದೆ ಅನೇಕ ಪಾಶ್ಚಾತ್ಯ ಭಾಷೆಗಳಿಗೆ ಈ ನಾಟಕದ ಪರಿವರ್ತನಗಳನ್ನು ಮಾಡಿಕೊಂಡು ಕಾವ್ಯಾನಂದ ರಸಪ್ರವಾಹವನ್ನು ತಮ್ಮ ತಮ್ಮ ದೇಶಗಳಲ್ಲಿ ಕೋಡಿಹರಿ ಸಿರುವರು. ಇಂಗ್ಲಿಷ್ ಭಾಷೆಯೊಂದರಲ್ಲಿಯೇ ಈಗ ಸುಮಾರು ಹದಿ ನೈದು ಪರಿವರ್ತನಗಳು ದೊರೆಯುವುವು. ಇಂತಹ ಭಾಷಾಂತರಗಳು ಜರ್ಮನ್ ಭಾಷೆಯಲ್ಲಿ ಹದಿನೆಂಟೂ, ಇಟ್ಯಾಲಿಯನ್ನಲ್ಲಿ ನಾಲ್ಕೂ, ಡ್ಯಾನಿಷಿನಲ್ಲಿ ಎರಡೂ, ಸ್ಪ್ಯಾನಿಷ್, ಪೋಲಿಷ್, ಹಂಗೇರಿಯನ್, ಬೊಹೀಮಿಯನ್, ಐಸ್‌ಲ್ಯಾಂಡಿಕ್— ಈ ಭಾಷೆಗಳಲ್ಲಿ ಒಂದೊಂದೂ ದೊರೆಯುವುವು. ಈಚೆಗೆ ಈ ನಾಟಕವು ಇನ್ನೂ ಯಾವ ಯಾವ ಭಾಷೆ ಗಳಿಗೆ ಪರಿವರ್ತಿತವಾಗಿರುವುದೆಂಬ ವಿಷಯವು ವ್ಯಕ್ತವಾಗಿ ಗೊತ್ತಾಗಿಲ್ಲ. ಪ್ರಪಂಚದ ಉತ್ತಮೋತ್ತಮ ಗ್ರಂಥಶತಕದ ಪಟ್ಟಿಯನ್ನು ಸಿದ್ಧಪಡಿಸಿದ ಸರ್ ಜಾನ್ ಲಬಕ್ಕನು (Sir John Lubbock) ಶಾಕುಂತಲ ವನ್ನೂ ಈ ಪಟ್ಟಿಯಲ್ಲಿ ಸೇರಿಸಿರುವನು. ಈಚೀಚೆಗೆ ಪಾಶ್ಚಾತ್ಯದೇಶಗ ಳಲ್ಲಿ ಶಾಕುಂತಲ ನಾಟಕವನ್ನು ಎಷ್ಟೋ ಸಾರಿ ಅಭಿನಯಿಸುತ್ತಲೂ, ಚಲನಚಿತ್ರ (Cinematograph) ಪ್ರದರ್ಶನಗಳ ಮೂಲಕ ಈ ನಾಟಕದ ಆನಂದ ಸೌರಭವನ್ನು ಜನರಲ್ಲೆಲ್ಲಾ ಹರಡುತ್ತಲೂ ಇರುವರು.

## ೨ ಕವಿಯ ಜಾತಿ ಮತ ದೇಶ ಕಾಲಗಳು

ಹೀಗೆ ಈ ನಾಟಕವೂ ಅದರ ಕರ್ತೃವಿನ ಹೆಸರೂ ಜಗದ್ವಿಖ್ಯಾತವಾಗಿದ್ದರೂ ಕಾಳಿದಾಸನ ಜಾತಿ ಮತ ದೇಶ ಕಾಲಗಳನ್ನು ಕುರಿತ ಸಂಗತಿಗಳು ನಿಷ್ಕೃಷ್ಟವಾಗಿ ತಿಳಿದುಬಂದಿಲ್ಲ. ಈ ವಿಚಾರಗಳಲ್ಲಿ ವಾದ ವಿವಾದಗಳು ವಿದ್ವನ್ಮಂಡಲಿಯಲ್ಲಿ ನಡೆಯುತ್ತಲೇ ಇರುವುವು. ಕಾಳಿದಾಸನ ಹೆಸರು ಭಾರತೀಯ ವಿದ್ವಾಂಸರುಗಳಿಗೆಲ್ಲಾ ಅತ್ಯಂತ ಪ್ರೀತಿಪಾತ್ರವಾಗಿರುವುದರಿಂದ ಈತನ ವಿಷಯವಾಗಿ ನೂರಾರು ಐತಿಹ್ಯಗಳು ಪಂಡಿತ ಪಾಮರರುಗಳಲ್ಲೆಲ್ಲಾ ಪ್ರಚಾರದಲ್ಲಿರುವುವು. ಇವುಗಳಲ್ಲಿ ಕೆಲವನ್ನು ಈ ಕೆಳಗೆ ಸೂಚಿಸುತ್ತೇವೆ.

**ಜಾತಿ**–ಕಾಳಿದಾಸನು ಕುರುಬರ ಜಾತಿಗೆ ಸೇರಿದವನೆಂದು ಹೇಳುವುದು ರೂಢಿಯಾಗಿರುವುದು. ಕುರುಬರವನಿಂದ ಶಾಕುಂತಲಾದಿ ಕಾವ್ಯರತ್ನಗಳು ನಿರ್ಮಿತವಾಗುವುದು ಅಸಂಭವವೆಂದು ಸ್ಪಷ್ಟವಾಗಿ ತೋರುವುದರಿಂದ ಈ ಆಕ್ಷೇಪ ನಿವಾರಣೆಗಾಗಿ, ಕಾಳಿದಾಸನು ಕುರುಬನಾಗಿದ್ದರೂ ತಾನು ಮದುವೆಮಾಡಿಕೊಂಡಿದ್ದ ರಾಜಪುತ್ರಿಯ ಬುದ್ಧಿವಾದಕೆ ಅನುಸಾರವಾಗಿ ಕಾಳಿಕಾದೇವಿಯಿಂದ ವರವನ್ನು ಸಂಪಾದಿಸಿದ ಕಾರಣ, ಆತನು ವರಕವಿಯಾದನೆಂದು ಒಂದು ಸಮಾಧಾನವನ್ನು ಕಲ್ಪಿಸಿರುವರು. ಮತ್ತೆ ಕೆಲವರು ಈ ಐತಿಹ್ಯದಲ್ಲಿ ನಂಬಿಕೆಯಿಡದೆ ಕಾಳಿದಾಸನು ಜನ್ಮತಃ ಬ್ರಾಹ್ಮಣನೇ ಎಂದು ಹೇಳುವರು ಇವರ ಕಥೆಗೆ ಅನುಸಾರವಾಗಿ— ಕಾಳಿದಾಸನು ಕಾಳಿಕಾಪುರದಲ್ಲಿದ್ದ ಕಾಳೀಯಶರ್ಮನೆಂಬ ಬ್ರಾಹ್ಮಣನ ಮಗನೆಂದೂ, ಕಾಳಿದಾಸನ ಮಾತಾ ಪಿತೃಗಳಿಬ್ಬರೂ ಸರ್ಪದಷ್ಟರಾಗಿ ಕಾಲವಾಗಲು ಆತನು ಒಬ್ಬ ಗುರುವಿನ ಬಳಿಯಲ್ಲಿ ವಿದ್ಯಾಭ್ಯಾಸಮಾಡಿಕೊಂಡಿದ್ದಾಗ ಒಂದು ದಿನ ಆ ಗುರುವಿನ ಶಾಪಕ್ಕೆ ಗುರಿಯಾಗಿ ತನಗೆ ಬರುತ್ತಿದ್ದ ವಿದ್ಯೆಯನ್ನೆಲ್ಲಾ ಮರೆತುಕೊಂಡು ಕುರುಬರ ಹಟ್ಟಿಯಲ್ಲಿ ವಾಸಮಾಡುತ್ತ ಕುರಿಗಳನ್ನು ಕಾದುಕೊಂಡಿದ್ದನೆಂದೂ, ಆದರೆ ಈತನ ಪೂರ್ವಜನ್ಮದ ಪುಣ್ಯಪರಿಪಾಕದಿಂದ ಇವನಿಗೆ ರಾಜಕನ್ಯೆಯೊಬ್ಬಳನ್ನು ಕೊಟ್ಟು ಮದುವೆಯಾಯಿತೆಂದೂ, ಆಕೆಯ ಮೂಲಕ ಈತನಿಗೆ ಪುನಃ

ವೈದುಷ್ಯವುಂಟಾಯಿತೆಂದೂ ತಿಳಿಯಬರುವುದು. ಈ ಕವಿಗೆ "ಮಾತೃ ಗುಪ್ತ" ಎಂಬ ಹೆಸರೂ ಇದ್ದ ಹಾಗೆ ಕೆಲವು ಐತಿಹ್ಯಗಳಿಂದ ಕಂಡು ಬರುವುದು. "ಗುಪ್ತ" ಎಂಬ ನಾಮಭಾಗವು ವೈಶ್ಯರಲ್ಲಿ ಬಹಳವಾಗಿಯೂ ಕ್ಷತ್ರಿಯರಲ್ಲಿ ಕ್ವಾಚಿತ್ಕವಾಗಿಯೂ ಕಂಡುಬರುವುದರಿಂದ, ಕ್ಷತ್ರಿಯ ವೈಶ್ಯ ರುಗಳು ಈ ಕವಿಯನ್ನು ತಮ್ಮ ವರ್ಣದವನೆಂದು ಹೇಳಿಕೊಳ್ಳಲೂ ಸ್ವಲ್ಪ ಅವಕಾಶವಿರುವುದು. ಆದರೆ ಇದಕ್ಕೆ ನಾಮಸಾದೃಶ್ಯದ ಆಧಾರ ಕ್ಕಿಂತಲೂ ಪ್ರಬಲವಾದ ಮತ್ತೆ ಯಾವ ಆಧಾರವೂ ಇಲ್ಲ. ಆದರೆ ಕಾಳಿದಾಸನ ಗ್ರಂಥಗಳಲ್ಲಿ ಕಂಡುಬರುವ ಶ್ರುತಿಸ್ಮೃತಿಪುರಾಣೇತಿಹಾಸ, ನೀತಿ, ಜ್ಯೋತಿಷ, ಮೀಮಾಂಸಾ, ಯೋಗ, ವೈದ್ಯ, ನಾಟ್ಯಶಾಸ್ತ್ರ, ಧನುರ್ವಿದ್ಯೆ, ಸಾಮುದ್ರಿಕ ಶಾಸ್ತ್ರ - ಇವುಗಳ ವಿಷಯಕವಾದ ಬಹು ಶ್ರುತತ್ವವನ್ನು ನೋಡಿದರೆ ಈ ಮಹಾಕವಿಯು ಬ್ರಾಹ್ಮಣ ವರ್ಗಕ್ಕೆ ಸೇರಿದವನೆಂದು ಭಾವಿಸಲು ಹೆಚ್ಚು ಅವಕಾಶವಿರುವುದು.

**ಮತ**—ಕಾಳಿದಾಸನ ಮತದ ವಿಷಯವಾಗಿಯೂ ಭಿನ್ನಾಭಿಪ್ರಾ ಯಗಳು ಇರುವುವು. "ಕಾಳಿದಾಸ" ಎಂಬ ನಾಮಸಾದೃಶ್ಯ ಮಾತ್ರ ದಿಂದಲೇ ಈತನು ಶಾಕ್ತೇಯನೆಂದು ಕೆಲನರು ಸಾಧಿಸಲು ಪ್ರಯತ್ನಿಸು ವರು. ಆದರೆ ಈ ವಾದಕ್ಕೆ ಅಂತಹ ಬಲವಾದ ಆಧಾರವಿರುವುದೆಂದು ಒಪ್ಪಿಕೊಳ್ಳಲಾಗುವುದಿಲ್ಲ. ಮತ್ತೆ ಕೆಲವರು ಈತನ ಗ್ರಂಥಗಳಲ್ಲಿ ಅಲ್ಲಲ್ಲಿ ಕಂಡುಬರುವ ವೈಷ್ಣವಭಕ್ತಿಯನ್ನೇ ಮುಂದುಮಾಡಿಕೊಂಡು ಕಾಳಿದಾಸನು ವೈಷ್ಣವನೇ ಎಂದು ಸಾಧಿಸಲು ಯತ್ನಿಸುವರು. ಇವರ ವಾದಕ್ಕೂ ಅಷ್ಟು ಪ್ರಬಲವಾದ ಆಧಾರಗಳಿವೆಯೆಂದು ಸಮ್ಮತಿಸಲಾಗು ವುದಿಲ್ಲ. ಕಾಳಿದಾಸನ ಮೂರು ನಾಟಕಗಳಲ್ಲಿಯ ನಾಂದೀ ಪದ್ಯಗಳು ಶಿವಪರವಾಗಿಯೇ ಇರುವುವು. ರಘುವಂಶದ ಆದಿ ಶ್ಲೋಕವೂ ಇಂತ ಹುದೇ. ಮೇಘಸಂದೇಶದಲ್ಲಿಯೂ ಸ್ಕಂದಮಹಾಕಾಲರ ವಿಷಯವಾಗಿ ಅತಿಶಯವಾದ ಭಕ್ತಿಯು ಹೊರಹೊಮ್ಮಿ ವ್ಯಕ್ತವಾಗುವುದು. ಕುಮಾರ ಸಂಭವದ ವೃತ್ತಾಂತವತೂ ಶೈವಕಥೆಯೇ. ಕುಮಾರಸಂಭವದ ಎರಡ ನೆಯ ಸರ್ಗದ ಐವತ್ತೆಂಟನೆಯ ಶ್ಲೋಕದ "ಪರಿಚ್ಛಿನ್ನ ಪ್ರಭಾವರ್ದ್ಧಿರ್ನ ಮಯಾ ನಚ ವಿಷ್ಣುನಾ" ಎಂದು ಬ್ರಹ್ಮನು ಶಿವನನ್ನು ಕುರಿತು ಹೇಳಿ

ರುವ ಭಾಗದಿಂದ, ಕಾಳಿದಾಸನ ಶೈವಭಕ್ತಿಯು ಎಷ್ಟು ಗಾಢವಾದು ದೆಂದು ಸ್ಪಷ್ಟವಾಗುವುದು. ಆದುದರಿಂದ ಕಾಳಿದಾಸನು ಶೈವಮತ ಪ್ರವಿಷ್ಟನೆಂದು ಕಂಡುಬರುವುದು. ಆದ ಮಾತ್ರಕ್ಕೇ ಈ ಕವಿಗೆ ಇತರ ಮತಗಳ ವಿಷಯದಲ್ಲಿ ಯಾವ ಬಗೆಯ ತಿರಸ್ಕಾರವಾಗಲೀ ಔದಾಸೀನ್ಯ ವಾಗಲಿ ಇದ್ದಿತೆಂದು ಭಾವಿಸಕೂಡದು. "ಬಹುಧಾಪ್ಯಾಗಮೈರ್ಭಿನ್ನಾಃ ಪಂಥಾನಃ ಸಿದ್ಧಿಹೇತವಃ"-ಎಂಗರೆ, ಮುಕ್ತಿ ಸಿದ್ಧಿಗೆ ಆಗಮಾನುಸಾರ ವಾಗಿ ಬೇರೆ ಬೇರೆ ಮಾರ್ಗಗಳು ಉಕ್ತವಾಗಿದ್ದರೂ ಅವೆಲ್ಲವೂ ಮೋಕ್ಷಕ್ಕೆ ಸಾಧನಗಳೇ-ಎಂಬುದು ಕಾಳಿದಾಸನ ಮಥಿತಾಭಿಪ್ರಾಯ ವೆಂದು ತೋರುವುದು.

**ದೇಶ** - ಕಾಳಿದಾಸ ಮಹಾಕವಿಯು ತಮ್ಮ ತಮ್ಮ ದೇಶದಲ್ಲಿ ಜನಿಸಿದವನೆಂದೋ, ತಮ್ಮ ದೇಶದಲ್ಲಿ ಕೆಲವು ಕಾಲ ವಾಸಿಸುತ್ತಿದ್ದನೆಂದೋ ಅಥವಾ ತಮ್ಮ ತಮ್ಮ ದೇಶಕ್ಕೂ ಕಾಳಿದಾಸನಿಗೂ ಇಂತಿಂತಹ ಸಂಬಂಧ ವಿದ್ದಿತೆಂದೋ ಅನೇಕ ಪ್ರಾಂತಗಳವರು ಐತಿಹ್ಯಗಳನ್ನು ಕಲ್ಪಿಸಿಕೊಂಡಿ ರುವರು. ಈಗಿನ ದರ್ಭಾಂಗ, ಮುಜಫರ್‌ನಗರ—ಈ ಜಿಲ್ಲೆಗಳಿಗೆ ಪೂರ್ವಕಾಲದಲ್ಲಿ ಮಿಥಿಲಾ ಎಂದು ಹೆಸರಿದ್ದಿತು. ಈ ಪ್ರಾಂತದಲ್ಲಿರುವ ದುರ್ಗಾಸ್ಥಾನ, ಉಚ್ಚೈತ್—ಎಂಬ ಪುರಾತನ ಗ್ರಾಮಗಳು ಕಾಳಿದಾ ಸನ ಜನ್ಮಸ್ಥಾನವೆಂದು ಆ ಪ್ರದೇಶಗಳಲ್ಲಿ ಪ್ರತೀತಿ ಇರುವುದೆಂದು ಮ। ರಾ। ದಿವಾನ್ ಬಹದ್ದೂರ್ ರಾಜಮಂತ್ರ ಪ್ರವೀಣ ಜ್ಞಾನಶರಣ ಚಕ್ರವರ್ತಿಯವರು ತಿಳಿಸುತ್ತಾರೆ. ಈ ಕಿಂವದಂತಿಗೆ ಇದಕ್ಕಿಂತಲೂ ಪ್ರಬಲವಾದ ಯಾವ ಆಧಾರವಿರುವುದೋ ತಿಳಿದಿಲ್ಲ. ಎರಡು ಗ್ರಾಮ ಗಳಿಗೂ ಈ ವಿಷಯದಲ್ಲಿ ಕಂಡುಬರುವ ಸ್ಪರ್ಧೆಯೇ ಸಂಶಯಾಸ್ಪದ ವಾಗಿರುವುದು. "ಕಾಳಿದಾಸ" ಎಂಬ ಹೆಸರು ಬಂಗಾಳದಲ್ಲಿ ವಿನಾ ಮತ್ತೆ ಯಾವ ಪ್ರಾಂತದಲ್ಲಿಯೂ ಬಹಳ ರೂಢಿಯಲ್ಲಿಲ್ಲದಿರುವುದರಿಂ ದಲೂ; ಕಾಳಿದಾಸನ ಗ್ರಂಥಗಳ ಶೈಲಿಯು ಬಂಗಾಳಿ ಭಾಷೆಯ ಶೈಲಿ ಯನ್ನು ಹೋಲುವುದರಿಂದಲೂ, ಕಾಳಿದಾಸನಿಂದಲೇ ರಚಿತವಾದುದೆಂದು ಹೇಳಿಕೊಳ್ಳುವ "ಜ್ಯೋತಿರ್ವಿದಾಭರಣ" ಎಂಬ ಗ್ರಂಥದಲ್ಲಿ ಕಾಳಿ ದಾಸನು ಇತರ ಗ್ರಂಥಗಳನ್ನು ಇತರ ಸ್ಥಳಗಳಲ್ಲಿ ಬರೆದು, ಕಡೆಯಲ್ಲಿ ಈ

ಗ್ರಂಥವನ್ನು ಉಜ್ಜಯಿನಿಯಲ್ಲಿ ಬರೆದಂತೆ ಹೇಳಿರುವುದರಿಂದಲೂ, ಕಾಳಿದಾಸನು ಬಂಗಾಳ ದೇಶದವನೆಂದು ಒಂದು ಸಿದ್ಧಾಂತವಿರುವುದೆಂದು ಮೇಲೆ ಹೇಳಿದ ದೊಡ್ಡ ಮನುಷ್ಯರು ತಿಳಿಸುವರು.

ಈ ಸಿದ್ಧಾಂತಕ್ಕೆ ಆಧಾರವಾಗಿರುವ ಮೂರು ವಿಷಯಗಳೂ ದುರ್ಬಲವಾದುವು. "ಕಾಳಿದಾಸ" ಎಂಬ ಒಂದು ಹೆಸರಿನ ಆಧಾರದಿಂದಲೇ ಇವನು 'ಇಂತಹ ಮತದವನು, ಇಂತಹ ಜಾತಿಯವನು, ಇಂತಹ ಕುಲದವನು, ಇಂತಹ ಸ್ಥಳದವನು ಎಂದು ಸಿದ್ಧಾಂತಗಳನ್ನು ಸ್ಥಾಪಿಸಲು ಪ್ರಯತ್ನಿಸುವುದಕ್ಕೆ ಪೌರಸ್ತ್ಯ ಪಾಶ್ಚಾತ್ಯ ವಿದ್ವಾಂಸರುಗಳಲ್ಲಿ ಯಾರೂ ಅಭಿಮತಿಸಲಾರರು. ಇದೂ ಅಲ್ಲದೆ "ಕಾಳಿದಾಸ" ಎಂಬುದು ಅಂಕಿತನಾಮವೇ ಎಂದು ಸಾಧಿಸುವುದು ಕಷ್ಟ. ಇದರ ಜೊತೆಗೆ "ಮಾತೃಗುಪ್ತ" ಎಂಬುದು ಈ ಕವಿಯ ನಿಜನಾಮಧೇಯವೆಂದು ಮತ್ತೊಂದು ಐತಿಹ್ಯವು ಸೂಚಿಸುತ್ತಿರುವುದು. ಇಂತಹುದರಲ್ಲಿ ನಾವು ಸಾದೃಶ್ಯಕ್ಕೇ ಅಷ್ಟೊಂದು ಪ್ರಾಶಸ್ತ್ಯವನ್ನು ಕೊಡಲಾಗುವುದಿಲ್ಲ. ಕಾಳಿದಾಸನ ಗ್ರಂಥಗಳ ಶೈಲಿಯನ್ನು ಹಿಡಿದು ಅವನು ಇಂತಹ ದೇಶದವನೇ ಎಂದು ಸಾಧಿಸುವುದೂ ಕಷ್ಟ. ಕಾಳಿದಾಸನ ಗ್ರಂಥಗಳ ಪಾಠಾಂತರಗಳು ಅನೇಕವಾಗಿ ಸಿಕ್ಕುವುವು. ಈ ಪಾಠಾಂತರಗಳು ದೇಶಾನುಗುಣ್ಯವಾಗಿ ಬಗೆಬಗೆಯಾಗಿರುವುವು. ದಕ್ಷಿಣ ದೇಶದಲ್ಲಿ ದೊರೆಯುವ ಕಾಳಿದಾಸನ ಗ್ರಂಥಗಳ ಕೆಲವು ಮಾತೃಕೆಗಳಲ್ಲಿ ಕಂಡುಬರುವ ಪಾಠಾಂತರಗಳನ್ನು ಫೋಕ್ಸ್ (Foulkes) ಎಂಬವರು ಮುದ್ರಿಸಿರುವರು. ಇನ್ನೂ ಇಂತಹ ಮಾತೃಕೆಗಳೂ ಪಾಠಾಂತರಗಳೂ ಎಷ್ಟೋ ಇರಬಹುದು. ಇಷ್ಟೊಂದು ಮಾತೃಕೆಗಳ ಪಾಠಾಂತರಗಳಲ್ಲಿ ಯಾವುದನ್ನು ಕಾಳಿದಾಸನು ಬರೆದ ಪಾಠವೆಂದು ನಿರ್ಧರಿಸಿ, ಈ ಬಗೆಯ ಶೈಲಿಯು ಇಂತಹ ದೇಶದಲ್ಲಿಯೇ ಪ್ರಚಾರದಲ್ಲಿರುವುದೆಂದು ನಿರ್ವಿವಾದವಾಗಿ ನಿರ್ಣಯಿಸಲು ಯಾರಿಗೂ ಸಾಧ್ಯವಲ್ಲವೆಂದು ಕಾಣುವುದು. ಆದುದರಿಂದ ಶೈಲಿಸಂಬಂಧವಾದ ಈ ಆಧಾರವನ್ನೂ ಪರಿಗ್ರಹಿಸಲಾಗುವುದಿಲ್ಲ. ಇನ್ನು, ಜ್ಯೋತಿರ್ವಿದಾಭರಣವು ರಘುವಂಶಾದಿ ಕಾವ್ಯತ್ರಯಗಳನ್ನು ಬರೆದ ಕಾಳಿದಾಸನಿಂದಲೇ ರಚಿತವಾಗಿರುವುದೆಂದು ಪ್ರತೀತಿ

ಯಿದ್ದರೂ, ಕಾಳಿದಾಸನು ಇದನ್ನೂ ಬರೆದನೆಂದು ಅನೇಕ ವಿದ್ವಾಂಸರು ಅಂಗೀಕರಿಸುವುದಿಲ್ಲ. ಈ ಗ್ರಂಥವು ಸುಮಾರು ಕ್ರಿ. ಶ. ೧೪ನೆಯ ಶತಮಾನದಿಂದ ಈಚೆಗೆ ಯಾರೋ ಒಬ್ಬನಿಂದ ರಚಿತವಾಗಿ ಕಾಳಿದಾಸನಿಗೆ ಆರೋಪಿತವಾಯಿತೆಂದು ಕಾಣುವುದು. ಇದೂ ಅಲ್ಲದೆ "ಶ್ರುತಿಕರ್ಮವಾದ" ಎಂಬ ಮತ್ತೊಂದು ಗ್ರಂಥವನ್ನೂ ಜ್ಯೋತಿರ್ವಿದಾಭರಣವನ್ನು ಬರೆದಾತನೇ ರಚಿಸಿರುವನೆಂದು ಅದೇ ಗ್ರಂಥದಿಂದಲೇ ತಿಳಿಯಬರುವುದು. ಕಾಳಿದಾಸನು ಶ್ರುತಿಕರ್ಮವಾದವನ್ನು ಬರೆದಿರುವನೆಂದು ಮತ್ತೆಲ್ಲಿಯೂ ಕಂಡುಬರುವುದಿಲ್ಲ. ಆದುದರಿಂದ ಜ್ಯೋತಿರ್ವಿದಾಭರಣದ ಆಧಾರವನ್ನು ಪರಿಗ್ರಹಿಸಲಾಗುವುದಿಲ್ಲ. ಒಂದುವೇಳೆ (ವಾದಾರ್ಥವಾಗಿ) ಅಂಗೀಕರಿಸಿದರೂ, "ಇತರ ಗ್ರಂಥಗಳನ್ನು ಇತರ ಸ್ಥಳಗಳಲ್ಲಿ ಬರೆದು"—ಎಂದರೆ, ಅವನ್ನು "ಬಂಗಾಳದಲ್ಲಿಯೇ ಬರೆದು" ಎಂದು ಅರ್ಥಮಾಡಿಕೊಳ್ಳುವುದು ಎಷ್ಟು ಮಾತ್ರಕ್ಕೂ ಉಚಿತವಲ್ಲ.

ಆದರೂ, ಬಂಗಾಳವೇ ಕಾಳಿದಾಸನ ಜನ್ಮದೇಶವೆಂದು ದೃಢೀಕರಿಸಲು ಮತ್ತೆ ಮತ್ತೆ ಪ್ರಯತ್ನಗಳು ೧೯೧೨ನೆಯ ಇಸವಿಯಿಂದಲೂ ನಡೆಯುತ್ತಲೇ ಇರುತ್ತವೆ. ಶ್ರೀ। ಮನ್ಮಥನಾಥ ಭಟ್ಟಾಚಾರ್ಯರೆಂಬ ವಿದ್ವಾಂಸರು ೧೯೨೧ನೆಯ ಇಸವಿ ಮೇ ೧೦ನೆಯ ತಾರೀಖಿನ ದಿನ ಓದಿದ ಒಂದು ಉಪನ್ಯಾಸದಲ್ಲಿ ಹೀಗೆ ಹೇಳಿರುವರು:—'ಕಾಳಿದಾಸನ ಗ್ರಂಥಗಳಲ್ಲಿ ಕಂಡುಬರುವ ಸ್ಥಳ ವರ್ಣನೆಗಳು ಬ್ರಾಹ್ಮಣಿ ತೋಲ (ನವದ್ವೀಪ) ಪ್ರಾಂತದಲ್ಲಿರುವ ಸಿಂಗ್ರಿಗೊಡ್ಡ ಎಂಬ ಸ್ಥಳಕ್ಕೆ ಚೆನ್ನಾಗಿ ಅನ್ವಯಿಸುವುವು. ಕಾಳಿದಾಸನ ಋತುಸಂಹಾರದಲ್ಲಿಯೂ ಶಾಕುಂತಲದಲ್ಲಿಯೂ ವರುಷವು ವಸಂತ ಋತುವಿನಲ್ಲಿ ಪ್ರಾರಂಭವಾಗುವುದು. ಹೀಗೆ ವಸಂತ ಋತುವಿನಲ್ಲಿ ವರ್ಷಾರಂಭವಾಗುವುದು ಬಂಗಾಳದಲ್ಲಿ ಮಾತ್ರ ಕಂಡುಬರುವುದು.'—ಇವೇ ಮೊದಲಾದ ಕೆಲವು ಕಾರಣಗಳನ್ನು ಸೂಚಿಸಿ ಕಾಳಿದಾಸನು ಬಂಗಾಳ ದೇಶದವನೇ ಎಂದು ಇವರು ಸಿದ್ಧಾಂತವನ್ನು ಮಾಡಲು ಯತ್ನಿಸಿರುವರು. ಅವರೆ ವಂಗದೇಶದ ವಿಜಯವನ್ನೂ ಕಾಳಿದಾಸನು ರಘುವಂಶದಲ್ಲಿ ವರ್ಣಿಸಿರುವನು. ಇದೂ ಅಲ್ಲದೆ ಕೆಲವು ವರ್ಣನೆಗಳನ್ನು ಮಾತ್ರ ನಂಬಿಕೊಂಡು ಇವು ನಮ್ಮ

ಪ್ರಾಂತದವನೇ, ಇತರ ಪ್ರದೇಶಗಳವು ಅಲ್ಲವೇ ಅಲ್ಲ ಎಂದು ನಿಷ್ಕೃಷ್ಟ ವಾಗಿ ನಿರ್ಧರಿಸುವುದಕ್ಕೆ ಆಗಲಾರದು. ಕಾಳಿದಾಸನ ವಿಷಯವಾಗಿ ಪರಿಶೋಧನೆಗಳನ್ನು ನಡೆಯಿಸುವ ಉದ್ದೇಶದಿಂದ "ಕಾಳಿದಾಸಸಂಶೋಧನಸಂಘ" (Kalidasa Research Committee) ಎಂಬ ಒಂದು ಸಂಸ್ಥೆಯನ್ನೇ ಬಂಗಾಳ ದೇಶೀಯರು ಸ್ಥಾಪಿಸಿಕೊಂಡು ಈಗ ಸುಮಾರು ಹತ್ತು ವರುಷಗಳಿಂದಲೂ ಅನೇಕ ವಿಷಯಗಳನ್ನು ವಿಚಾರ ಮಾಡುತ್ತಿರುವರು. ಒಟ್ಟಿನಲ್ಲಿ, ನಮ್ಮ ವಂಗೀಯಭ್ರಾತೃಗಳು ಉಪಪಾದಿಸುವಂತೆ–ಕಾಳಿದಾಸನು ವಂಗೀಯನು–ಎಂಬ ಸಿದ್ಧಾಂತವು ಅನೇಕ ವಿದ್ವಾಂಸರುಗಳಿಂದ ಪುರಸ್ಕೃತವಾಗಿಲ್ಲವೆಂದು ಹೇಳಬಹುದು.

ಮತ್ತೆ ಕೆಲವರು ಭೋಜಪ್ರಬಂಧವನ್ನು ನಂಬಿಕೊಂಡು, ಭೋಜನ ಚರಮಶ್ಲೋಕದ ವಿಷಯದಲ್ಲಿ ಪ್ರಾಮಾಣ್ಯವನ್ನು ಪುರಸ್ಕರಿಸಿ, ಭೋಜ ರಾಜಧಾನಿಯಾದ ಧಾರಾನಗರದಲ್ಲಿ ಕಾಳಿದಾಸನು ಬಹುಕಾಲ ವಾಸಿಸುತ್ತಿದ್ದನೆಂದು ಹೇಳುವರು. ಆದರೆ ಕಾಳಿದಾಸನು ಭೋಜರಾಜನ ಕಾಲದಲ್ಲಿಯೇ ಜೀವಿಸಿರಲಿಲ್ಲವೆಂದು ನಿಷ್ಕೃಷ್ಟವಾಗಿರುವುದರಿಂದ ಆತನು ಧಾರಾನಗರದಲ್ಲಿ ವಾಸಿಸುತ್ತಿರಲಿಲ್ಲವೆಂಬುದು ಸ್ವತಃ ಸಿದ್ಧವಾದಂತಾಯಿತು. ಮಾತೃಗುಪ್ತನೆಂದು ನಾಮಾಂತರವನ್ನು ಹೊಂದಿದ್ದ ಕಾಳಿದಾಸನು ಕಾಶ್ಮೀರದೇಶದಲ್ಲಿ ಸ್ವಲ್ಪಕಾಲ ರಾಜಪ್ರತಿನಿಧಿಯಾಗಿದ್ದನೆಂದು ಮತ್ತೊಂದು ಐತಿಹ್ಯದಿಂದ ತಿಳಿದುಬರುವುದು.

ಭರತಖಂಡದ ಮತ್ತೊಂದು ತುದಿಯಲ್ಲಿರುವ ಸಿಂಹಳದ್ವೀಪದ ನಿವಾಸಿಗಳೂ ಸಹ ಕಾಳಿದಾಸನು ಕಾಲವಾಗುವುದಕ್ಕೆ ಮುಂಚೆ ತಮ್ಮ ದ್ವೀಪದಲ್ಲಿ ವಾಸವಾಗಿದ್ದನೆಂದು ಹೇಳುವರಲ್ಲದೆ, ಆ ದ್ವೀಪದಲ್ಲಿ ಒಂದಾನೊಂದು ರಮ್ಯಸ್ಥಾನದಲ್ಲಿರುವ ಒಂದು ತೋಪಿನ ನಡುವಣ ಪ್ರದೇಶವನ್ನು ತೋರಿಸಿ, ಕಾಳಿದಾಸನನ್ನು ಸುಟ್ಟ ಸ್ಥಳವು ಅದೇ ಎಂದು ಈಗಲೂ ತೋರಿಸುವರಂತೆ! ಇಷ್ಟೇ ಅಲ್ಲದೆ, ಧನಲೋಭಗ್ರಸ್ತಳಾದ ಒಬ್ಬ ವೇಶ್ಯೆಯ ಕೈಯಿಂದ ಕಾಳಿದಾಸನು ಹತನಾಗಲು, ಅವನ ಶವವನ್ನು ಸುಡುತ್ತಿದ್ದ ವೇಳೆಯಲ್ಲಿ, ಸಿಂಹಳದ್ವೀಪದ ದೊರೆಯಾದ ಕುಮಾರಧಾತುಸೇನನೆಂಬವನು, ತನ್ನ ಮಿತ್ರನಾದ ಕಾಳಿದಾಸನ ಮೇಲಣ ವಾತ್ಸಲ್ಯಾತಿ

ಶಯದಿಂದ, ಕ್ರಿ. ಶ. ೫೨೪ರಲ್ಲಿ ತಾನೂ ಚಿತೆಯಲ್ಲಿ ಬಿದ್ದು ಪ್ರಾಣವನ್ನು ಕಳೆದುಕೊಂಡನೆಂಬ ಒಂದು ಪ್ರತೀತಿಯಿದ್ದಿತೆಂದು ಸಿಂಹಳೀಯರ 'ಪೂಜಾವಲಿಯ' ಎಂಬ ಗ್ರಂಥಭಾಗದಿಂದ ತಿಳಿದುಬರುವುದು.

ಕಾಳಿದಾಸನು ಮಾಳವ ದೇಶದಲ್ಲಿದ್ದನೆಂದು ಅನೇಕರು ನಂಬು ವರು. ಜನರಿಗೆ ತಮ್ಮ ತಮ್ಮ ಮಾತೃದೇಶದ ವಿಷಯದಲ್ಲಿ ಅಭಿಮಾನ ವಿರುವುದು ಸಹಜ. ಬಾಲ್ಯದಲ್ಲಿ ಕಂಡು ಕೇಳಿದ ವಿಷಯಗಳು ಮನಃ ಫಲಕದಲ್ಲಿ ಸ್ಥಿರಚಿತ್ರಿತವಾಗಿರುವುದೇ ಇದಕ್ಕೆ ಕಾರಣವೆಂದು ತೋರು ವುದು. ಆದಿಪಂಪನು ತಾನು ಮೊದಲು ವಾಸಿಸುತ್ತಿದ್ದ ದೇಶವನ್ನು ಕುರಿತು, "ತೆಂಕನಾಡ ಮರೆಯಲ್ಕೆಂದುಂ ಮನಂ ಬರ್ಕುಮೇ" ಎಂದು ಹೇಳಿಕೊಂಡು ತನ್ನ ಮಾತೃದೇಶವನ್ನು ನೆನೆದುಕೊಂಡಿರುವನು. ಕಾಳಿ ದಾಸನ ಮೇಘಸಂದೇಶದಲ್ಲಿ ಉಜ್ಜಯಿನೀ ಪಟ್ಟಣ, ಸಿಪ್ರಾನದಿ, ಮಹಾ ಕಾಲಕ್ಷೇತ್ರ, ವಿಂಧ್ಯಪರ್ವತ—ಈ ಸ್ಥಳಗಳನ್ನು ಕುರಿತು ಆತನು ಕೊಟ್ಟಿ ರುವ ವಿವರವಾದ ವರ್ಣನೆಗಳನ್ನು ನೋಡಿದರೆ ಆತನಿಗೂ ಮಾಳವ ದೇಶಕ್ಕೂ ನಿಕಟ ಸಂಬಂಧವಿದ್ದಿತೆಂದು ತೋರುವುದು. ರಘುವಂಶದ ನಾಲ್ಕನೆಯ ಸರ್ಗದಲ್ಲಿ ರಘುಮಹಾರಾಜನು ಜಯಿಸಿದ್ದ ಅನೇಕ ದೇಶ ಗಳೂ, ಅವುಗಳ ದಿಕ್ಕುಗಳೂ ವರ್ಣಿತವಾಗಿವೆ. ಆದರೆ ಪ್ರಸಿದ್ಧವಾದ ಅವಂತೀದೇಶದ ಪ್ರಸ್ತಾವವೇ ಇರುವುದಿಲ್ಲ. ಆದುದರಿಂದ ಕಾಳಿದಾಸನು ಅವಂತೀದೇಶದಲ್ಲಿ ವಾಸವಾಗಿದ್ದನೆಂದೂ, ತನ್ನ ದೇಶವು ಹಿಂದೆ ಒಬ್ಬ ರಾಜನಿಂದ ವಿಜಿತವಾಗಿದ್ದಿತೆಂದು ಹೇಳಿಕೊಳ್ಳುವುದು ಅಪಮಾನಕರ ವೆಂದೂ ಭಾವಿಸಿ ಆತನು ಅವಂತಿಯ ಹೆಸರನ್ನು ಬಿಟ್ಟಿರಬಹುದೆಂದೂ, ಕೆಲವರು ವಿದ್ವಾಂಸರು ಭಾವಿಸುವರು. ಇದೂ ಅಲ್ಲದೆ ರಘುವಂಶದ ಆರನೆಯ ಸರ್ಗದಲ್ಲಿ ಇಂದುಮತಿಯ ಸ್ವಯಂವರಕ್ಕೆ ಬಂದಿದ್ದ ರಾಜರು ಗಳನ್ನು ವರ್ಣಿಸುವಾಗ ಕಾಳಿದಾಸನು ಅವಂತೀದೇಶದ ರಾಜನನ್ನು "ವಿಕ್ರಮಾದಿತ್ಯ" ಎಂಬ ಧ್ವನಿ ತೋರುವಂತೆ ವಿಶೇಷವಾಗಿ ವರ್ಣಿಸಿರು ವನು. ಹೀಗೆ ಮಾಡಿರುವುದಕ್ಕೆ ಅವಂತಿಯ ಮೇಲೆಯೂ ಆ ದೇಶದ ರಾಜನ ಮೇಲೆಯೂ ಕಾಳಿದಾಸನಿಗೆ ಇದ್ದ ಅಭಿಮಾನವೇ ಕಾರಣ ವೆಂದು ಕೆಲವರು ಹೇಳುವರು. ಅಂತೂ, "ಕಾಳಿದಾಸನು ಮಾಳವ

ದೇಶದ ನಿವಾಸಿ” ಎಂಬ ಸಿದ್ಧಾಂತವು ಅನೇಕ ಪ್ರಾಜ್ಞರುಗಳಿಂದ ಅಂಗೀಕೃತವಾಗಿರುವುದೆಂದು ಸದ್ಯದಲ್ಲಿ ಭಾವಿಸಬಹುದಾಗಿದೆ.

**ಕಾಲ**— ಕಾಳಿದಾಸನ ಕಾಲದ ವಿಷಯದಲ್ಲಂತೂ ಅನೇಕ ಭಿನ್ನಾಭಿಪ್ರಾಯಗಳಿರುವುವು. ಮಾಳವಿಕಾಗ್ನಿಮಿತ್ರದಲ್ಲಿ ಶುಂಗವಂಶದ ಅಗ್ನಿಮಿತ್ರನ ವಿಷಯವು ಕಂಡುಬರುವುದು. ಆದುದರಿಂದ ಕಾಳಿದಾಸನು ಅಗ್ನಿಮಿತ್ರನ ಕಾಲಕ್ಕೆ (ಕ್ರಿ. ಪೂ. ೧೫೦ಕ್ಕೆ) ಹಿಂದಿನವನಲ್ಲವೆಂದು ಸ್ಪಷ್ಟವಾಗುವುದು. ಕ್ರಿ. ಶ. ೪೭೩ನೆಯ ವರುಷದಲ್ಲಿ ಹುಟ್ಟಿದ ಹುಂಡೇಶ್ವರದ ಶಾಸನದ ಶ್ಲೋಕಗಳಿಗೂ ಕಾಳಿದಾಸನ ಶ್ಲೋಕಗಳಿಗೂ ಬಹಳ ಸಾಮ್ಯವಿರುವುದು. (ಉದಾ— “ಚಲತ್ಪತಾಕಾನಿ ಗೃಹಾಣಿ ಯತ್ರ—” ಎಂಬ ಶಾಸನದ ೧೦ನೆಯ ಶ್ಲೋಕಕ್ಕೂ, ಉತ್ತರಮೇಘದ ಪ್ರಥಮ ಶ್ಲೋಕವಾದ “ವಿದ್ಯುತ್ವಂತಂ ಲಲಿತ......ವಿಶೇಷೈಃ” ಎಂಬ ಶ್ಲೋಕಕ್ಕೂ ಹೋಲಿಸಿ ನೋಡಬಹುದು.) ಎರಡನೆಯ ಪುಲಿಕೇಶಿಯ ಐಹೊಳೆ ಮೇಗುತಿಯ ಶಾಸನದಲ್ಲಿ ಕಾಳಿದಾಸನ ಹೆಸರು ವರ್ಣಿತವಾಗಿರುವುದು. ಈ ಶಾಸನವು ಕಲಿಯುಗಾಬ್ದ ೩೭೩೫ರಲ್ಲಿ, ಎಂದರೆ ಕ್ರಿ. ಶ. ೬೩೪ರಲ್ಲಿ ಹುಟ್ಟಿದುದು. ಇದನ್ನು ಬರೆದ ರವಿಕೀರ್ತಿಯು, ತಾನೂ ಕಾಳಿದಾಸನಂತೆ ಪ್ರಸಿದ್ಧನಾದ ಕವಿಯೆಂದು ಸ್ತೋತ್ರಮಾಡಿಕೊಂಡಿರುವನು. ಇದೂ ಅಲ್ಲದೆ, ಕ್ರಿ. ಶ. ೬೦೬ರಿಂದ ೬೪೭ರ ವರೆಗೆ ಆಳುತ್ತಿದ್ದ ಹರ್ಷವರ್ಧನನ ಕಾಲದಲ್ಲಿ ಆಸ್ಥಾನ ಕವಿಯಾಗಿದ್ದ ಬಾಣನು ತನ್ನ ಹರ್ಷಚರಿತ್ರದಲ್ಲಿ “ನಿರ್ಗತಾಸು ನ ವಾ ಕಸ್ಯ ಕಾಲಿದಾಸಸ್ಯ ಸೂಕ್ತಿಷು” ಎಂದು ಕಾಳಿದಾಸನ ಪ್ರಸಕ್ತಿಯನ್ನು ಎತ್ತಿರುವನು. ದಶಪುರ (**Mandasore**)ದ ಶಾಸನವನ್ನು ಬರೆದ ವತ್ಸಭಟ್ಟಿಯ ಶ್ಲೋಕಗಳಿಗೂ ಕಾಳಿದಾಸನ ಋತುಸಂಹಾರ ಮೇಘದೂತಗಳ ಶ್ಲೋಕಗಳಿಗೂ ಅನೇಕ ಸಾಮ್ಯಗಳು ಕಂಡುಬಂದಿರುವುವು. ಕ್ರಿ. ಶ. ೬ನೆಯ ಶತಮಾನದಲ್ಲಿದ್ದ ದಂಡಿಯು ತನ್ನ ಕಾವ್ಯಾದರ್ಶದ ಪ್ರಥಮಪರಿಚ್ಛೇದದ ೪೫ನೆಯ ಶ್ಲೋಕದಲ್ಲಿ “ಲಕ್ಷ್ಮ ಲಕ್ಷ್ಮೀಂ ತನೋತೀತಿ ಪ್ರತೀಕ ಸುಭಗಂ ವಚಃ” ಎಂಬೆಡೆಯಲ್ಲಿ ಶಾಕುಂತಲದ ಮೊದಲನೆಯ ಅಂಕದ ೨೦ನೆಯ ಶ್ಲೋಕದ ಭಾಗವಾದ “(ಮಲಿನಮಪಿ ಹಿಮಾಂಶೋಃ) ಲಕ್ಷ್ಮ ಲಕ್ಷ್ಮೀಂ ತನೋತಿ” ಎಂಬ

ದನ್ನು ಪ್ರಯೋಗಿಸಿರುವನು. ಇದೂ ಅಲ್ಲದೆ ಕುಮಾರಿಲಭಟ್ಟನು ತನ್ನ ತಂತ್ರವಾರ್ತಿಕದಲ್ಲಿ—

"ಏವಂ ಚ ವಿದ್ವದ್ವಚನಾದ್ವಿನಿರ್ಗತಂ
ಪ್ರಸಿದ್ಧರೂಪಂ ಕವಿಭಿರ್ನಿರೂಪಿತಂ ।
ಸತಾಂ ಹಿ ಸಂದೇಹಪದೇಷು ವಸ್ತುಷು
ಪ್ರಮಾಣಮಂತಃಕರಣಪ್ರವೃತ್ತಯಃ"

ಎಂಬೆಡೆಯಲ್ಲಿ ಶಾಕುಂತಲದ ಮೊದಲನೆಯ ಅಂಕದ ೨೩ನೆಯ ಶ್ಲೋಕದ ಉತ್ತರಾರ್ಧವನ್ನು ಅನುವಾದ ಮಾಡಿರುವನು. ಈ ಕುಮಾರಿಲಭಟ್ಟನು ಕ್ರಿ. ಶ. ೮ನೆಯ ಶತಮಾನದಲ್ಲಿದ್ದವನು. ಹನ್ನೊಂದನೆಯ ಶತಮಾನ ದಲ್ಲಿದ್ದಲ್ಲಿ ಕ್ಷೀರಸ್ವಾಮಿಯೆಂಬ ಕಾಶ್ಮೀರದೇಶದ ವಿದ್ವಾಂಸನು ತನ್ನ ಅಮರಕೋಶವ್ಯಾಖ್ಯಾನದಲ್ಲಿ ಕುಮಾರಸಂಭವ, ರಘುವಂಶ, ಮೇಘ ದೂತ, ವಿಕ್ರಮೋರ್ವಶೀಯಗಳಿಂದ ತೆಗೆದ ಅನುವಾದಗಳನ್ನು ಪ್ರಯೋ ಗಿಸಿರುವನು. ಆದುದರಿಂದ ಕಾಳಿದಾಸನ ಕೀರ್ತಿಯು ಹರಡಬೇಕಾಗಿ ದ್ದರೂ, ಆತನ ಗ್ರಂಥಗಳು ದೇಶದೇಶಗಳಲ್ಲಿ ಪ್ರಚಾರಕ್ಕೆ ಬರಬೇಕಾದರೂ ಮುದ್ರಣ ಸೌಲಭ್ಯವಿಲ್ಲದ ಆ ಕಾಲದಲ್ಲಿ ಅನೇಕ ವರುಷಗಳು ಹಿಡಿದಿರ ಬೇಕೆಂದು ಸ್ಪಷ್ಟವಾಗುವುದು. ಆದುದರಿಂದ ಕಾಳಿದಾಸನು ಅಗ್ನಿಮಿತ್ರನ ಕಾಲಕ್ಕೂ ಶ್ರೀಹರ್ಷನ ಕಾಲಕ್ಕೂ ಮಧ್ಯದಲ್ಲಿದ್ದನೆಂದು ನಿಸ್ಸಂಶಯದಿಂದ ಹೇಳಬಹುದು. ಆದರೆ ಈ ಅವಧಿಗಳ ನಡುವೆ ಕಾಳಿದಾಸನು ಯಾವಾಗ ಜೀವಿಸಿದ್ದನೆಂಬ ವಿಷಯದಲ್ಲಿ ಪ್ರಬಲವಾದ ಸಂಶಯಗಳು ಇರುವುದ ರಿಂದ ಅನೇಕ ವಿಧವಾದ ಭಿನ್ನಾಭಿಪ್ರಾಯಗಳು ಇರುವುವು. ಈ ಕೆಳಗೆ ಕೆಲವು ಅಭಿಪ್ರಾಯಗಳನ್ನು ಕುರಿತು ಸಂಕ್ಷೇಪವಾಗಿ ಸೂಚಿಸುತ್ತೇವೆ:—

೧. ಕಾಳಿದಾಸನು ಅಗ್ನಿಮಿತ್ರನ ಸಮಕಾಲೀನನಾಗಿದ್ದನೆಂಬುದು ಕೆಲವರ ಅಭಿಪ್ರಾಯವು. ಇದಕ್ಕೆ ಮಾಳವಿಕಾಗ್ನಿಮಿತ್ರದ ಅಂತ್ಯದಲ್ಲಿರುವ

"ಆಶಾಸ್ಯಮೀತ್ಯಧಿಗಮಾತ್ ಪ್ರಭೃತಿ ಪ್ರಜಾನಾ ।
ಸಂಪದ್ಯತೇ ನ ಖಲು ಗೋಪ್ತರಿ ನಾಗ್ನಿಮಿತ್ರೇ" —

ಎಂಬ ಭರತವಾಕ್ಯವೇ ಒಂದು ಆಧಾರವು. ಈ ಮಂಗಳಶ್ಲೋಕದಲ್ಲಿ ಕಂಡುಬರುವ 'ಅಗ್ನಿಮಿತ್ರ' ಶಬ್ದವನ್ನು ಕಂಡು "ಅತ್ರ ಪ್ರಜಾನಾಂ

ಆಶಾಸ್ಯ ಸಿದ್ಧಿಂ ಪ್ರತಿಗೋಪ್ತ್ರುರಗ್ನಿಮಿತ್ರಕಥನಂ; ತತ್ಕಾಲ ರಾಜೋಪ
ಲಕ್ಷಣಮಿತಿ ಮಂತವ್ಯಂ"–ಎಂದರೆ, ಕಾಳಿದಾಸನೂ ಅಗ್ನಿಮಿತ್ರನೂ
ಸಮಕಾಲೀನರೆಂದು ಕಾಟಯುವೇಮನೆಂಬ ವ್ಯಾಖ್ಯಾನಕರ್ತನು ಅಭಿ
ಪ್ರಾಯಪಟ್ಟಿರುವನು. ಆದರೆ, "ಮುದ್ರಾರಾಕ್ಷಸ" ನಾಟಕದ ವ್ಯಾಖ್ಯಾನ
ದಲ್ಲಿ 'ಮೌರ್ಯಸಚಿವ' ಎಂಬ ಕಡೆ, 'ಮೌರ್ಯನಾಮಕ ಸಚಿವ' ಎಂದು
ಕಾಟಯುವೇಮನು ಅರ್ಥಮಾಡಿಕೊಂಡಿರುವುದನ್ನು ನೋಡಿದರೆ ಆತನ
ಇತಿಹಾಸಜ್ಞಾನವು ವಿಶ್ವಸನೀಯವಲ್ಲವೆಂಬ ಹೆದರಿಕೆಯುಂಟಾಗುವುದು.
ಅದೂ ಅಲ್ಲದೆ ಮುದ್ರಾರಾಕ್ಷಸ ನಾಟಕದ ಭರತವಾಕ್ಯದಲ್ಲಿಯೂ ಚಂದ್ರ
ಗುಪ್ತನ ಹೆಸರು ಪ್ರಸಕ್ತವಾಗಿರುವುದು. ಇದ ಮಾತ್ರಕ್ಕೇ ಅದರ
ಕವಿಯಾದ ವಿಶಾಖದತ್ತನೂ ಚಂದ್ರಗುಪ್ತನೂ ಸಮಕಾಲೀನರೆಂದು
ಹೇಳಲಾದೀತೆ? ವಿಶಾಖದತ್ತನು ಇದ್ದದು ಕ್ರಿ. ಶ. ೬ನೆಯ ಶತಮಾನ
ದಲ್ಲಿ. ಭರತ ಖಂಡದ ಮೂವರು ಚಂದ್ರಗುಪ್ತರಲ್ಲಿ ಯಾರೂ ಕ್ರಿ. ಶ.
೪೧೩ರಿಂದ ಈಚೆಗೆ ಇದ್ದವರಲ್ಲ. ಆದುದರಿಂದ ಚಂದ್ರಗುಪ್ತ ವಿಶಾಖ
ದತ್ತರೆಂದಿಗೂ ಸಮಕಾಲೀನರಲ್ಲ. ಹೀಗೆ ಅಗ್ನಿಮಿತ್ರ ಕಾಳಿದಾಸರೂ
ಸಮಕಾಲೀನರಾಗಿರಲಾರರು; ಭರತವಾಕ್ಯದಲ್ಲಿ ಅಗ್ನಿಮಿತ್ರನ ಪ್ರಸಕ್ತಿ
ಯು ಬಂದಿರುವುದಕ್ಕೆ ಕಾಲ ದೇಶ ವರ್ತಮಾನಗಳಿಗೆ ತಕ್ಕಂತೆ ವರ್ಣಿ
ಸುವ ಕವಿಯ ಪ್ರಾಗಲ್ಭ್ಯವೇ ಹೊರತು ರಾಜನ ದಾಕ್ಷಿಣ್ಯವೆಂದು ಹೇಳ
ಲಾಗದು"—ಎಂದು ಅನೇಕರು ಪ್ರತಿ ಹೇಳುವರು. ಕಾಟಯುವೇಮನ
ವ್ಯಾಖ್ಯಾನದ ಆಧಾರದಿಂದಲೂ, ಅಲಹಾಬಾದಿನ ಬಳಿಯಲ್ಲಿರುವ ಬೀಟ
ಎಂಬ ಸ್ಥಳದಲ್ಲಿ ಕ್ರಿ ಶ. ೧೯೦೯–೧೦ರಲ್ಲಿ ದೊರೆತ ಶುಂಗರಾಜರ
ಕಾಲದ (ಕ್ರಿ. ಪೂ. ೧೮೪–೭೨) ಒಂದು ಬಿರುದಿನ ಬಿಲ್ಲೆಯಲ್ಲಿ ಕಂಡು
ಬರುವ ಶಕುಂತಲೋಪಾಖ್ಯಾನವನ್ನು ಸೂಚಿಸುವ ಚಿತ್ರವನ್ನು ನೋ
ಡಿಯೂ, ಕಾಳಿದಾಸನ ಶಬ್ದಪ್ರಯೋಗಗಳನ್ನೂ, ಶೈಲಿಸಂಬಂಧವಾದ
ಇತರ ಸಂಗತಿಗಳನ್ನೂ, ಮಾಳವಿಕಾಗ್ನಿಮಿತ್ರ ಶಾಕುಂತಲ ನಾಟಕಗಳಲ್ಲಿ
ಕಂಡುಬರುವ ಬೌದ್ಧಮತವಿರುದ್ಧವಾದ ಯಜ್ಞ, ಈಶ್ವರನಾದ ವಿಷಯ
ಗಳನ್ನು ಪರಿಶೀಲಿಸಿಯೂ, ಪ್ರೊ॥ ಶಾರದಾರಂಜನ್ ರಾಯ್ ಅವರು–
"ಕಾಳಿದಾಸನು ಅಗ್ನಿಮಿತ್ರನ ಆಸ್ಥಾನಕವಿ" ಎಂದು ಅಭಿಪ್ರಾಯಪಟ್ಟರು

ವರು. ಪ್ರೊ। ರಘುನಾಥ ದಾಮೋದರ ಕರ್‌ಮರ್‌ಕರ್ ಅವರು—ಶಾಕುಂತಲದ ಆರನೆಯ ಅಂಕದ ಹಿಂದಣ ವಿಷ್ಕಂಭದಲ್ಲಿ ಚೌರ್ಯಕ್ಕಾಗಿ ಮರಣದಂಡನೆಯನ್ನು ಪ್ರಸ್ತಾವಿಸಿರುವುದೂ, ಧನಮಿತ್ರನ ಪತ್ನಿಯ ಗರ್ಭಸ್ಥ ಶಿಶುವಿಗೆ (ಪತ್ನಿಗೆ ಅಲ್ಲ) ದಾಯಭಾಗವಿರುವಂತೆ ಪ್ರಸ್ತಾವಿಸಿರುವುದೂ, ಬೃಹಸ್ಪತಿಸ್ಮೃತಿಗೆ ಅನುಸಾರವಾಗಿವೆಯೆಂದೂ, ಈ ಸ್ಮೃತಿಯು ಕ್ರಿ. ಶ. ೧ನೆಯ ಶತಮಾನದಲ್ಲಿ ಹುಟ್ಟಿದುದರಿಂದ ಕ್ರಿ. ಶ. ೧ನೆಯ ಶತಮಾನಕ್ಕೆ ಹಿಂದೆಯೇ ಕಾಳಿದಾಸನು ಇದ್ದಿರಬೇಕೆಂದೂ ವಾದಿಸುವರು. ಅಂತೂ, ಕಾಳಿದಾಸನು ಕ್ರಿಸ್ತಶಕಾರಂಭಕ್ಕೆ ಸ್ವಲ್ಪ ಮುಂಚೆ ಇದ್ದನೆಂಬ ಅಭಿಪ್ರಾಯವು ಈಚೀಚೆಗೆ ಪರಿಗ್ರಾಹ್ಯವಾಗುತ್ತಿರುವುದು.

೨. ಕಾಳಿದಾಸನು ವಿಕ್ರಮಾದಿತ್ಯನ ಕಾಲದಲ್ಲಿ (ಕ್ರಿ. ಪೂ. ೫೭) ಇದ್ದನೆಂಬುದು ಬಹಳ ಕಾಲದಿಂದಲೂ ಭಾರತೀಯರಲ್ಲಿ ಹರಡಿಕೊಂಡಿರುವ ಅಭಿಪ್ರಾಯವು. ಇದಕ್ಕೆ ಮುಖ್ಯವಾಗಿ ಮೇಲೆ ಹೇಳಿದ ಜ್ಯೋತಿರ್ವಿದಾಭರಣದ ೨೨ನೆಯ ಅಧ್ಯಾಯದ ೧೦ನೆಯ ಶ್ಲೋಕವಾದ,

"ಧನ್ವಂತರಿ ಕ್ಷಪಣಕಾಮರಸಿಂಹ ಶಂಕು
ವೇತಾಳಭಟ್ಟ ಘಟಕರ್ಪರ ಕಾಳಿದಾಸಾಃ ।
ಖ್ಯಾತೋ ವರಾಹಮಿಹಿರೋ ನೃಪತೇಸ್ಸಭಾಯಂ
ರತ್ನಾನಿ ವೈ ವರರುಚಿರ್ನವ ವಿಕ್ರಮಸ್ಯ ॥"

ಎಂಬುದೇ ಮುಖ್ಯಾಧಾರವು. ಆದರೆ ಈ ಗ್ರಂಥವು ವಿಕ್ರಮನ ಕಾಲದಿಂದ ಅನೇಕ ಶತಮಾನಗಳ ಈಚೆಗೆ ಹುಟ್ಟಿದುದೆಂದು ನಿರ್ಣಯವಾಗಿದೆ. ಇದೂ ಅಲ್ಲದೆ ಈ ಶ್ಲೋಕದಲ್ಲಿ ಕಂಡುಬರುವ "ನವರತ್ನ"ಗಳೂ ಬೇರೆ ಬೇರೆ ಶತಮಾನಗಳಲ್ಲಿದ್ದವರು. ಕಲಿಯುಗಾದಿ ೩೦೬೮ನೆಯ ವರುಷದಲ್ಲಿ—ಎಂದರೆ, ಕ್ರಿ. ಪೂ. ೩೩-೩೪ರಲ್ಲಿ—ಶಾಲೀವಾಹನ ಶಕಕ್ಕೆ ೧೧೧ ವರುಷಗಳಿಗೆ ಮುಂಚೆ—ಹುಟ್ಟಿತೆಂದು (೨೨ನೆಯ ಅಧ್ಯಾಯ, ೨೧ನೆಯ ಶ್ಲೋಕ) ಹೇಳಿಕೊಳ್ಳುವ ಈ ಗ್ರಂಥದಲ್ಲಿ, ಶಾಲೀವಾಹನ ಶಕ ವರುಷದ ಸಂಖ್ಯೆಯು ಗೊತ್ತಿದ್ದರೆ ಅದಕ್ಕೆ ತಕ್ಕ ಪ್ರಭವಾದಿಸಂವತ್ಸರವನ್ನು ಕಂಡು ಹಿಡಿಯುವ ಕ್ರಮವು ಹೇಳಿದೆ! (೧ನೆಯ ಅಧ್ಯಾಯ, ೧೬ನೆಯ ಶ್ಲೋಕ). ಇದೂ ಅಲ್ಲದೆ ಈ ಗ್ರಂಥದ ಶೈಲಿಯು ಬಹಳ ವಿಲಕ್ಷಣವಾಗಿಯೂ

ಅಶುದ್ಧವಾಗಿಯೂ ಇದೆ. ಯಾರೋ ಒಬ್ಬ ಆಧುನಿಕ ಕವಿಯಿಂದ ಈ ಗ್ರಂಥವು ರಚಿತವಾಗಿರುವ ಹಾಗೆ ಕಾಣುವುದು. ಆದುದರಿಂದ, "ಧನ್ವಂತರಿ ಕ್ಷಪಣಕಾಮರ..............." ಇತ್ಯಾದಿ ಶ್ಲೋಕವನ್ನು ಆಧಾರವಾಗಿ ಅಂಗೀಕರಿಸತಕ್ಕ ಆಧುನಿಕ ವಿದ್ವಾಂಸರೇ ಈಗ ಅತಿ ವಿರಳ. ಆದರೂ ಕ್ರಿ. ಪೂ. ೧ನೆಯ ಶತಮಾನಕ್ಕೆ ಹಿಂದೆ ವಿಕ್ರಮಾದಿತ್ಯನೆಂಬ ರಾಜನಿದ್ದನೆಂಬುದನ್ನು ಅನೇಕ ವಿದ್ವಾಂಸರು ಇನ್ನೂ ಬಗೆಬಗೆಯ ನಿದರ್ಶನಗಳಿಂದ ಸ್ಥಾಪಿಸಿಕೊಳ್ಳಲು ಪ್ರಯತ್ನಿಸಿರುವರು. ಮತ್ತೆ ಕೆಲವರು ಈ ವಾದಗಳನ್ನು ಹಲವು ವಿಧವಾದ ಪ್ರಮಾಣಗಳಿಂದ ಖಂಡಿಸುವರು. ಈ ವಾದ ವಿವಾದಗಳು ಬಹಳ ತೊಡಕಾಗಿಯೂ ದೀರ್ಘವಾಗಿಯೂ ಇರುವುದರಿಂದ ಇವುಗಳ ಗೋಜಿಗೆ ಇಲ್ಲಿ ಪ್ರವೇಶಿಸುವುದು ಅನಾವಶ್ಯಕವೆಂದು ತಿಳಿದು ಬಿಟ್ಟು ಬಿಡಲಾಗಿದೆ. ಈ ಸಿದ್ಧಾಂತವನ್ನು ಅನುಮೋದಿಸುವ ವಿದ್ವಾಂಸರಲ್ಲಿ ಹೋರೆಸ್ ವಿಲ್ಸನ್ (Horace Wilson), ಪೀಟರ್‌ಸನ್ (Peterson), ನಂದರ್‌ಗೀಕರ್, ಬಿ. ಡಿ. ಬಾನರ್ಜಿ, ಶಂಕರಪಂಡಿತ್ ಮೊದಲಾದವರು ಮುಖ್ಯರು.

೩. ಕಾಳಿದಾಸನು ಕ್ರಿ. ಶ. ಮೂರನೆಯ ಶತಮಾನದಲ್ಲಿದ್ದನೆಂಬ ವಿಷಯ:— ಲ್ಯಾಸೆನ್ (Lassen) ಎಂಬ ಪಾಶ್ಚಾತ್ಯ ವಿದ್ವಾಂಸನು ಕಾಳಿದಾಸನ ನಾಟಕಗಳಲ್ಲಿ ಪ್ರಯೋಗಿಸಿರುವ ಪ್ರಾಕೃತಭಾಷೆಯನ್ನೇ ಮುಖ್ಯಾಧಾರವಾಗಿ ಅವಲಂಬಿಸಿ, ಬೇರೆ ಬೇರೆ ಕಾಲದ ಶಾಸನಗಳಲ್ಲಿ ಕಂಡು ಬರುವ ಪ್ರಾಕೃತಭಾಷೆಯೊಡನೆ ಹೋಲಿಸಿ, ಕ್ರಿ. ಶ. ೩ನೆಯ ಶತಮಾನದಲ್ಲಿ ಕಾಳಿದಾಸನು ಜೀವಿಸಿದ್ದನೆಂದು ಹೇಳುವನು. ಮತ್ತೆ ಕೆಲವರು ವಿದ್ವಾಂಸರು ಕಾಳಿದಾಸನ ಪ್ರಾಕೃತ ಪ್ರಯೋಗಗಳಲ್ಲಿ ಬಹಳ ಬೆರಕೆಯು ಕಂಡುಬರುವುದೆಂದು ಅಭಿಪ್ರಾಯಪಡುವರು. ಆದುದರಿಂದ ಪ್ರಾಕೃತ ಭಾಷೆಯ ಆಧಾರವೊಂದನ್ನೇ ಅವಲಂಬಿಸಿ ಸಿದ್ಧಾಂತಗಳನ್ನು ಕಲ್ಪಿಸಿಕೊಳ್ಳುವುದು ಅಷ್ಟು ಯುಕ್ತವಾಗಿ ಕಂಡುಬರುವುದಿಲ್ಲ. ಪ್ರೊ॥ ಮೋನಿಯರ್ ವಿಲಿಯಂಸ್ (Prof. Monier Williams) ಅವರೂ ಮೂರನೆಯ ಶತಮಾನದಲ್ಲಿ ಕಾಳಿದಾಸನು ಇದ್ದನೆಂಬ ಸಿದ್ಧಾಂತವನ್ನು ಅನುಮೋದಿಸುವರು.

೪. ಕಾಳಿದಾಸನು ಕ್ರಿ. ಶ. ೪ನೆಯ ಶತಮಾನದಲ್ಲಿ ಇದ್ದನೆಂದು ಮತ್ತೆ ಕೆಲವರು ಅಭಿಪ್ರಾಯಪಡುವರು. ಕುಮಾರಸಂಭವ ರಘುವಂಶಗಳು ಅಸಮಗ್ರವಾಗಿರುವುದಕ್ಕೆ ಕಾರಣವನ್ನು ಸೂಚಿಸುವುದರಲ್ಲಿ ಅಭಿನಿವೇಶವುಳ್ಳ ಕೆಲವರು, ಭರತಖಂಡವು ಪರರಾಜಾಕ್ರಾಂತವಾಗಿದ್ದ ವಿಷಯವನ್ನು ಸೂಚಿಸುವುದಕ್ಕಾಗಿಯೇ ಕವಿಯು ಗ್ರಂಥವನ್ನು ಅರ್ಧಾಂತರವಾಗಿಯೇ ನಿಲ್ಲಿಸಿರಬಹುದೆಂದು ಊಹಿಸುವರು. ರಘುವಂಶವನ್ನು ಮುಗಿಸದೆ ಹೋದುದಕ್ಕೆ ಕವಿಯು ಅಷ್ಟರಲ್ಲಿ ಕಾಲವಾದುದೇ ಕಾರಣವಾಗಿದ್ದರೂ ಆಗಿರಬಹುದು. ಭರತಖಂಡವು ಕ್ರಿ. ಶ. ೩೮೦ರಲ್ಲಿ ಪರರಾಜರ ಹಾವಳಿಗೆ ಒಳಗಾಗಿದ್ದರೂ ಆತನ ಗ್ರಂಥಗಳ ಅಸಮಗ್ರತೆಯ ಆಧಾರದಿಂದಲೇ ಅದೇ ಕಾಲದಲ್ಲಿಯೇ ಕವಿಯು ಇದ್ದನೆಂದು ಸ್ಥಾಪಿಸುವುದು ಕಷ್ಟ. ಮಿ॥ ಕೀತ್ (Keith) ಎಂಬ ಪಾಶ್ಚಾತ್ಯ ವಿದ್ವಾಂಸರು ಕ್ರಿ. ಶ. ೪ನೆಯ ಶತಮಾನದ ಅಂತ್ಯದಲ್ಲಿ ಕಾಳಿದಾಸನು ಬದುಕಿದ್ದನೆಂದು ಅಭಿಪ್ರಾಯಪಡುವರು.

೫. ಐದನೆಯ ಶತಮಾನದಲ್ಲಿ ಕಾಳಿದಾಸನು ಇದ್ದನೆಂದು ಮಿ॥ ಮೆಕ್ಡಾನೆಲ್ (Macdonell), ಮಿ॥ ವಿನ್ಸೆಂಟ್ ಸ್ಮಿತ್ (Vincent Smith), ಮಿ॥ ಕೆ. ಬಿ. ಪಾಠಕ್ ಮೊದಲಾದ ಮತ್ತೆ ಕೆಲವರು ವಿದ್ವಾಂಸರು ಅಭಿಪ್ರಾಯ ಪಡುವರು. ದಶಪುರ (ಈಗಿನ ಮಂಡೇಶ್ವರ) ದಲ್ಲಿ ಕ್ರಿ. ಶ. ೪೭೩ರಲ್ಲಿ ಹುಟ್ಟಿದ ಸೂರ್ಯದೇವಸ್ಥಾನ ಸ್ಥಾಪನೆಗೆ ಸಂಬಂಧಪಟ್ಟ ಶಾಸನದ ಶೈಲಿಯನ್ನೂ, ಈ ಶಾಸನದ ಶ್ಲೋಕಗಳಿಗೂ ಕಾಳಿದಾಸನ ಗ್ರಂಥಗಳಿಗೂ ಇರುವ ಸಾಮ್ಯಗಳನ್ನೂ ನಂಬಿಕೊಂಡು ಕಾಳಿದಾಸನು ೫ನೆಯ ಶತಮಾನದಲ್ಲಿದ್ದನೆಂದು ಪ್ರೊ॥ ಮೆಕ್ಡಾನೆಲ್ ಅವರು ಭಾವಿಸಿರುವರು.

ವಿಕ್ರಮಾದಿತ್ಯನು ಶಕರನ್ನು ಜಯಿಸಿದನೆಂದು ಪ್ರತೀತಿಯಿರುವುದಷ್ಟೆ! ಕ್ರಿ. ಶ. ೩೭೫ರಿಂದ ೪೧೩ರ ವರೆಗೆ ಆಳುತ್ತಿದ್ದ ಎರಡನೆಯ ಚಂದ್ರಗುಪ್ತನು ಮಾಳವ, ಗುಜರಾತ್, ಕ್ಯಾಥೆವಾಡ್ ಪ್ರಾಂತದಲ್ಲಿ ಅನೇಕ ಶತಮಾನಗಳವರೆಗೂ ನೆಲೆಸಿದ್ದ ಶಕರಾಜರನ್ನು ಜಯಿಸಿ ಭರತಖಂಡಕ್ಕೆ ಅವರ ಹಾವಳಿಯನ್ನು ತಪ್ಪಿಸಿದನು. ಈತನಿಗೆ ವಿಕ್ರಮಾದಿತ್ಯನೆಂಬ

ಬಿರುದೂ ಇದ್ದಿತು. ಇವನ ತಂದೆಯ ಕಾಲದಲ್ಲಿ ಈತನು ಉಜ್ಜಯಿನಿಯಲ್ಲಿ ರಾಜಪ್ರತಿನಿಧಿಯಾಗಿಯೂ ಇದ್ದನೆಂದು ತೋರುವುದು. ಆದುದರಿಂದ ಭಾರತೀಯರಲ್ಲಿ ಅಷ್ಟೊಂದು ಪ್ರಸಿದ್ಧನಾಗಿರುವ ವಿಕ್ರಮಾದಿತ್ಯನು ಈ ಎರಡನೆಯ ಚಂದ್ರಗುಪ್ತನೇ. ಇವನ ಮತ್ತು ಇವನ ಮಗನಾದ ಕುಮಾರಗುಪ್ತ (೪೧೩–೪೫೫)ನ ಆಸ್ಥಾನದಲ್ಲಿಯೇ ಕಾಳಿದಾಸನು ಇದ್ದಿರಬೇಕು—ಎಂದು ಮಿ॥ ವಿನ್‌ಸೆಂಟ್ ಸ್ಮಿತ್ ಅವರು ಅಭಿಪ್ರಾಯಪಡುವರು. ಕೋಲ್‌ಬ್ರೂಕ್ (Colebrook) ಎಂಬ ಪಂಡಿತರು, ಜ್ಯೋತಿಶ್ಶಾಸ್ತ್ರಸಂಬಂಧವಾದ ಆಧಾರಗಳಿಂದ, ಕಾಳಿದಾಸನು ಕ್ರಿ. ಶ. ೫ಯ ಶತಮಾನದ ಅಂತ್ಯದಲ್ಲಿದ್ದನೆಂದು ಹೇಳಿರುವರು.

ಪ್ರೊ। ಪಾಠಕರು ರಘುವಂಶದ ನಾಲ್ಕನೆಯ ಸರ್ಗದ ೬೭–೬೮ನೆಯ ಶ್ಲೋಕಗಳಲ್ಲಿ ಪ್ರಸಕ್ತವಾಗಿರುವ ಹೂಣವಿಜಯದ ಆಧಾರದ ಮೇಲೆ, ಹೂಣರು ಕ್ರಿ. ಶ. ೫ನೆಯ ಶತಮಾನದಲ್ಲಿ ವಂಕ್ಷು (ಆಕ್ಸಸ್) ನದಿಯ ತೀರದಲ್ಲಿ ನೆಲಸಿದ್ದರೆಂದೂ ಇವರನ್ನು ವಿಕ್ರಮಾದಿತ್ಯನೆಂಬ ಬಿರುದನ್ನು ಧರಿಸಿದ್ದ ಸ್ಕಂದಗುಪ್ತನು ಕ್ರಿ. ಶ. ೪೫೦ರಲ್ಲಿ ಜಯಿಸಿದ್ದನೆಂದೂ, ಆದುದರಿಂದ ಈ ವಿಷಯವೇ ಮೇಲೆ ಹೇಳಿದ ಶ್ಲೋಕಗಳಲ್ಲಿ ಸೂಚಿತವಾಗಿದೆಯೆಂದೂ ವಾದಿಸುವರು. ತನ್ನ ಪೋಷಕನ ವಿಜಯವನ್ನು ಹೀಗೆ ಪ್ರಸ್ತಾವಿಸಿರುವುದರಿಂದಲೇ ಕಾಳಿದಾಸನು ಕ್ರಿ. ಶ. ೫ನೆಯ ಶತಮಾನದಲ್ಲಿ ಇದ್ದಿರಬೇಕೆಂದು ಇವರು ಹೇಳುವರು.

೬. ಆರನೆಯ ಶತಮಾನದಲ್ಲಿ ಕಾಳಿದಾಸನು ಇದ್ದನೆಂದು ಫರ್ಗಸನ್ (Fergusson), ಮಾಕ್ಸ್‌ಮುಲ್ಲರ್ (Max Muller) ಹರಪ್ರಸಾದ ಶಾಸ್ತ್ರಿ, ಪ್ರೊ। ವೀಬರ್ (Prof. Weber), ಕರ್ನ್ (Kern), ಡಾ। ಭೌದಾಜಿ–ಇವರೇ ಮೊದಲಾದ ಅನೇಕ ವಿದ್ವಾಂಸರು ವಾದಿಸುವರು. ಆದರೆ ಇವರ ವಾದಕ್ಕೆ ಪ್ರಬಲವಾದ ಅನೇಕ ಪ್ರತಿಬಂಧಕಗಳಿರುವುವು. ಈ ವಾದ ಪ್ರತಿವಾದಗಳು ನೀರಸವಾಗಿರುವುದರಿಂದ ಅವನ್ನು ಇಲ್ಲಿ ಹೇಳಿಲ್ಲ. ಬಹಳ ಕಾಲದ ವರೆಗೂ ಈ ವಿಷಯದಲ್ಲಿ ದೊಡ್ಡ ದೊಡ್ಡ ವಿದ್ವಾಂಸರಿಗಿದ್ದ ನಂಬಿಕೆಯು ಈಚೀಚೆಗೆ ಕಡಿಮೆಯಾಗುತ್ತಿರುವುದೆಂದು ತೋರುವುದು.

ಇದೇ ಸಂದರ್ಭದಲ್ಲಿಯೇ ಸಂಸ್ಕೃತ ವಿದ್ವನ್ಮಂಡಲಿಗಳಲ್ಲಿ ಬಹಳ ವಿಸ್ತಾರವಾಗಿ ಹರಡಿಕೊಂಡಿರುವ "ಕಾಳಿದಾಸನು ಭೋಜರಾಜನ ಸಮಕಾಲೀನನು" ಎಂಬ ಮತ್ತೊಂದು ಅಭಿಪ್ರಾಯವನ್ನು ಕುರಿತು ಪ್ರಸ್ತಾವಿಸಬೇಕಾಗಿದೆ. ಈ ಅಭಿಪ್ರಾಯಕ್ಕೆ "ಭೋಜಪ್ರಬಂಧ" ಎಂಬ ಗ್ರಂಥವೇ ಮೂಲಾಧಾರ. ಈ ಗ್ರಂಥದಲ್ಲಿ ಪ್ರಸಕ್ತರಾಗಿರುವ ಅನೇಕ ಕವಿಗಳು ಬೇರೆ ಬೇರೆ ಕಾಲದಲ್ಲಿದ್ದವರು. ಮುಂಜಪುತ್ರನಾದ ಭೋಜರಾಜನು ಧಾರಾಪುರಿಯಲ್ಲಿ ಇದ್ದುದು ಕ್ರಿ. ಶ. ೧೦೧೮ಕ್ಕೂ ೧೦೬೦ಕ್ಕೂ ಮಧ್ಯದಲ್ಲಿ. ಈ ರಾಜನಿಗೆ ಹಿಂದೆಯೇ ಕಾಳಿದಾಸನು ಇದ್ದನೆಂಬುದಕ್ಕೆ ಅನೇಕ ಪ್ರಮಾಣಗಳು ದೊರೆಯುವುವು. ಇಂತಹ ಕೆಲವನ್ನು ಮೇಲೆ ಸೂಚಿಸಲಾಗಿದೆ. ಹನ್ನೊಂದನೆಯ ಶತಮಾನಕ್ಕೆ ಹಿಂದಣ ಕರ್ಣಾಟಕ ವಾಙ್ಮಯದಲ್ಲಿಯೇ ಕಾಳಿದಾಸನ ಪ್ರಸಕ್ತಿಯು ಅನೇಕ ಕಡೆಗಳಲ್ಲಿ ಕಂಡುಬರುವುದು. ಕವಿರಾಜಮಾರ್ಗದ ಕರ್ತೃವಾದ ನೃಪತುಂಗನು (ಕ್ರಿ. ಶ. ೮೧೪–೮೭೭) ತನ್ನ ಗ್ರಂಥದ ಪ್ರಥಮ ಪರಿಚ್ಛೇದದ ೩೧ನೆಯ ಶ್ಲೋಕದಲ್ಲಿ ಕಾಳಿದಾಸನನ್ನು "ಅಮಳಕವಿವೃಷಭರ್ಕಳ" ಶ್ರೇಣಿಯಲ್ಲಿ ಸೇರಿಸಿಕೊಂಡಿರುವನು. ಆದಿಪಂಪನು (ಕ್ರಿ. ಶ. ೯೪೩) ತನ್ನ ಆದಿಪುರಾಣ ಪಂಪಭಾರತಗಳಲ್ಲಿ ಶಾಕುಂತಲ ರಘುವಂಶಗಳ ಕೆಲವು ಶ್ಲೋಕಗಳನ್ನು ಪರಿವರ್ತಿಸಿ ಪ್ರಯೋಗಿಸಿಕೊಂಡಿರುವನು. [ಶಾಕುಂತಲದ ಅಂಕ ೨, ಶ್ಲೋಕ ೫ರೊಡನೆ ಪಂಪಭಾರತದ ಆಶ್ವಾಸ ೫, ಪದ್ಯ ೪೭ನ್ನೂ; ಅಂಕ ೪, ಶ್ಲೋಕ ೧೭ರೊಡನೆ ಆದಿಪುರಾಣದ ಅಧ್ಯಾಯ ೪, ಪದ್ಯ ೫೫ನ್ನೂ; ರಘುವಂಶದ ಸರ್ಗ ೫, ಶ್ಲೋಕ ೩೭ರೊಡನೆ ಆದಿಪುರಾಣದ ಅಧ್ಯಾಯ ೮, ಪದ್ಯ ೪೩ನ್ನೂ; ಸರ್ಗ ೧, ಪದ್ಯ ೧೩ರೊಡನೆ ಪಂಪಭಾರತದ ಆಶ್ವಾಸ ೧, ಪದ್ಯ ೬೭ನ್ನೂ ಹೋಲಿಸಿನೋಡಿರಿ] ಪೊನ್ನನು (ಕ್ರಿ. ಶ. ಸು. ೯೫೦) ತನ್ನ ಶಾಂತಿಪುರಾಣದಲ್ಲಿ "ಮುನ್ನಿನ ಕಾಳಿದಾಸಂಗನ್ನೂರ್ಮಡಿ ರಚನೆಯೊಳ್ ಕುರುಳ್ಗಳಸವಣಂ" ಎಂದು ಹೇಳಿಕೊಂಡಿರುವನು. ಇದೂ ಅಲ್ಲದೆ, ಇವನು ರಘುವಂಶದ ಆರನೆಯ ಸರ್ಗದ ೫೧ನೆಯ ಶ್ಲೋಕದ ಆಧಾರದಿಂದಲೇ ಶಾಂತಿಪುರಾಣದ ಐದನೆಯ ಆಶ್ವಾಸದ ೧೩೦ನೆಯ ಪದ್ಯವನ್ನು ರಚಿಸಿಕೊಂಡಿರುವನು. ಆದು

ದರಿಂದ ಅತಿಶಯೋಕ್ತಿಯು ತುಂಬಿ ಕೋಡಿಹರಿಯುತ್ತಿರುವ ಭೋಜ ಪ್ರಬಂಧವನ್ನು ಆಧಾರಗ್ರಂಥವೆಂದು ನಂಬುವುದಕ್ಕೆ ಆಧುನಿಕ ವಿದ್ವಾನಂತರಾತೂ ಒಪ್ಪಲಾರರು. ವಿನೋದಾರ್ಥವಾಗಿ ಯಾರೋ ಒಬ್ಬ ಆಧುನಿಕ ಕವಿಯಿಂದ ಅದು ಸಂಕಲಿತವೋ ನಿರ್ಮಿತವೋ ಆದ ಗ್ರಂಥ ವೆಂಬು ತೋರಿಬರುವುದು. ಆದಕಾರಣ ಕಾಳಿದಾಸಭೋಜರನ್ನು ಸಮಕಾಲೀನರಾಗಿ ಪರಿಭಾವಿಸುವುದು ಎಷ್ಟು ಮಾತ್ರಕ್ಕೂ ಸರಿಯಲ್ಲ.

ಒಟ್ಟಿನಲ್ಲಿ, ಕಾಳಿದಾಸನ ಕಾಲವಿಚಾರವನ್ನು ಕುರಿತು ಸರ್ವಸಮ್ಮತನಾದ ಯಾವ ಸಿದ್ಧಾಂತವೂ ಇನ್ನೂ ಸ್ಥಾಪಿತವಾಗಿಲ್ಲ ಎಂದು ಹೇಳಬಹುದು. ಸದ್ಯದಲ್ಲಿ ಕಾಳಿದಾಸನು ಅಗ್ನಿಮಿತ್ರನ (ಕ್ರಿ. ಪೂ. ೧೫೦) ಸಮಕಾಲೀನನಾಗಿದ್ದನೆಂದು ಭಾವಿಸಬಹುದಾಗಿದೆ.

## ೩. ಕಾಳಿದಾಸನ ಗ್ರಂಥಗಳು

ಮೇಘದೂತ, ರಘುವಂಶ, ಕುಮಾರಸಂಭವಗಳೆಂಬ ಕಾವ್ಯತ್ರಯವನ್ನೂ ಮಾಳವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ, ಶಾಕುಂತಲಗಳೆಂಬ ನಾಟಕತ್ರಯವನ್ನೂ ಕಾಳಿದಾಸನು ಬರೆದನೆಂದು ಪ್ರಾಯಶಃ ಎಲ್ಲಾ ವಿದ್ವಾಂಸರೂ ಒಪ್ಪುವರು. ಮಾಳವಿಕಾಗ್ನಿಮಿತ್ರವನ್ನು ಕಾಳಿದಾಸನು ಬರೆದಿರಲಾರನೆಂದು ವಿಲ್ಸನ್ (Wilson) ಅವರು ಹೇಳಿರುವರು. ಋತುಸಂಹಾರವೆಂಬ ಮತ್ತೊಂದು ಗ್ರಂಥವನ್ನೂ ಕಾಳಿದಾಸನೇ ಬರೆದನೆಂದು ಪ್ರತೀತಿ ಇರುವುದು. ಆದರೆ ಈ ವಿಷಯದಲ್ಲಿ ಕೆಲವರು ಭಿನ್ನಾಭಿಪ್ರಾಯವುಳ್ಳವರಾಗಿರುವರು. ಜ್ಯೋತಿರ್ವಿದಾಭರಣವೆಂಬ ಗ್ರಂಥದಲ್ಲಿ

ಕಾವ್ಯತ್ರಯಂ ಸುಮತಿಕೃದ್ರಘುವಂಶ ಪೂರ್ವಂ ।
ಜಾತಂ ಯತೋ ನನು ಕಿಯಚ್ಛ್ರುತಿ ಕರ್ಮವಾದಃ ।
ಜ್ಯೋತಿರ್ವಿದಾಭರಣ ಕಾಲವಿಧಾನ ಶಾಸ್ತ್ರಂ ।
ಶ್ರೀ ಕಾಲಿದಾಸ ಕವಿತೋ ಹಿಚ ತದ್ಬಭೂವ ॥—

ಎಂಬ ಶ್ಲೋಕವು ದೊರೆಯುವುದು. ಈ ಶ್ಲೋಕದಲ್ಲಿ ಕಾಳಿದಾಸನ ನಾಟಕಗಳ ಪ್ರಸಕ್ತಿಯೇ ಇರುವುದಿಲ್ಲ. ಶ್ರುತಿಕರ್ಮವಾದ ಜ್ಯೋತಿರ್ವಿ

ದಾಭರಣಗಳೆಂಬ ಗ್ರಂಥಗಳನ್ನು ಕಾಳಿದಾಸನು ರಚಿಸಿದನೆಂಬುದಕ್ಕೆ ಮತ್ತೆ ಯಾವ ಆಧಾರವೂ ಸಿಕ್ಕುವುದಿಲ್ಲ. ಶ್ರುತಬೋಧವೆಂಬ ೪೩ ಶ್ಲೋಕಗಳುಳ್ಳ ಛಂದೋಗ್ರಂಥವೂ ಕಾಳಿದಾಸನಿಂದಲೇ ವಿರಚಿತವಾಯಿ ತೆಂದು ಪ್ರತೀತಿಯಿರುವುದು. ಆದರೆ ಇದಕ್ಕೆ ದೃಢವಾದ ಆಧಾರವೇನಿ ರುವುದೋ ತಿಳಿದುಬಂದಿಲ್ಲ. ಮೆಕ್ಡಾನೆಲ್ ಮೊದಲಾದ ಕೆಲವರು ವಿದ್ವಾಂಸರು, ಸೇತುಬಂಧವೆಂಬ ಪ್ರಾಕೃತಕಾವ್ಯವನ್ನೂ ಕಾಳಿದಾಸನು ರಚಿಸಿದಂತೆ ಪ್ರತೀತಿ ಇರುವುದಾಗಿ ಹೇಳುತ್ತಾರೆ. ಆದರೆ ಇದಕ್ಕೆ ಪ್ರಬಲವಾದ ಆಧಾರವಿರುವಂತೆ ತೋರುವುದಿಲ್ಲ. ಹೀಗೆಯೇ ನಳೋ ದಯ, ಶೃಂಗಾರತಿಲಕಗಳೆಂಬ ಗ್ರಂಥಗಳೂ ಕಾಳಿದಾಸನವೇ ಎಂದು ಊಹೆಯಿರುವುದು. ಆದರೂ ಇಂತಹ ಪ್ರತೀತಿಗಳಿಗೆ ಬಲವತ್ತರವಾದ ಆಧಾರಗಳು ಇರುವುವೆಂದು ಹೇಳಲಾಗುವುದಿಲ್ಲ.

**ಶಾಕುಂತಲ ನಾಟಕದ ಮಾತೃಕೆಗಳು**—ಮೊದಲೇ ಹೇಳಿರು ವಂತೆ ಈ ಮಾತೃಕೆಗಳು ಭರತಖಂಡದ ನಾನಾ ಪ್ರಾಂತಗಳಲ್ಲಿ ದೊರೆ ಯುತ್ತವೆ. ಈ ಮಾತೃಕೆಗಳನ್ನು (೧) ದಕ್ಷಿಣದೇಶದ ಲಿಪಿಗಳ ಮಾತೃಕೆ ಗಳು, (೨) ನಾಗರಲಿಪಿಯ ಮಾತೃಕೆಗಳು, (೩) ವಂಗಲಿಪಿಯವು— ಎಂದು ಮೂರು ತರಗತಿಗಳಾಗಿ ವಿಂಗಡಿಸಬಹುದು. ದಕ್ಷಿಣದೇಶದ ಮಾತೃಕೆಗಳು ಪ್ರಾಯಶಃ ಆಂಧ್ರ ಗ್ರಂಥಲಿಪಿಗಳಲ್ಲಿ ಲಿಖಿತವಾಗಿವೆ. ನಾಗರಲಿಪಿಯವು ಕಾಶಿ ಪ್ರಯಾಗ ಮಹಾರಾಷ್ಟ್ರ ಪ್ರಾಂತಗಳಲ್ಲಿ ಕಂಡು ಬರುವುವು. ಬಂಗಾಳದ ಪ್ರಾಂತಗಳಲ್ಲಿ ದೊರೆಯುವ ಮಾತೃಕೆಗಳು ವಂಗಲಿಪಿಯಲ್ಲಿ ಲಿಖಿತವಾಗಿವೆ. ಮೊದಲಿನ ಎರಡು ತರಗತಿಗಳ ಮಾತೃಕೆಗಳಿಗೂ ಪ್ರಬಲವಾದ ಪರಸ್ಪರ ಭೇದವಿರುವುದಿಲ್ಲ. ಆದರೆ ಈ ಮಾತೃಕೆಗಳು ವಂಗಲಿಪಿಯವುಗಳಿಗಿಂತ ಸಂಕ್ಷೇಪವಾಗಿವೆ ಈ ಸಂ ಕ್ಷಿಪ್ತ ಮಾತೃಕೆಗಳನ್ನು ಕಂಡು, ಶಾಕುಂತಲ ನಾಟಕದ ಭಾಗಗಳನು ದಾಕ್ಷಿಣಾತ್ಯನಾಗರಲಿಪಿಯವುಗಳಲ್ಲಿ ಮನಸ್ಸು ಬಂದಂತೆ ತಿದ್ದಿಬಿಟ್ಟಿರು ವರು ಎಂದು ವಂಗಮಾತೃಕೆಗಳನ್ನು ಮೆಚ್ಚಿಕೊಂಡಿರುವವರು, ಲೇಖ ಕಾಧ್ಯಾಪಕವರ್ಗವನ್ನು ದೂಷಿಸುವರು. ದಾಕ್ಷಿಣಾತ್ಯ ನಾಗರ ಮಾತೃ ಕಾಭಿಮಾನಿಗಳಾದರೋ ವಂಗದೇಶೀಯರು ಬೇಕೆಂದು ಶಾಕುಂತಲ

ನಾಟಕಕ್ಕೆ ಅನಾವಶ್ಯಕವೂ ಅನುಚಿತವೂ ಆದ ತಿದ್ದುಪಾಡುಗಳನ್ನು ಮಾಡಿಕೊಂಡಿರುವರೆಂದು ತಪ್ಪು ಕಂಡುಹಿಡಿಯುವರು. ದೇವನಾಗರಿಯ ಲಿಪಿಯ ಮಾತೃಕೆಗಳ ವಿಷಯದಲ್ಲಿ ಮಾನಿಯರ್ ವಿಲಿಯಂಸ್ ಮೊದಲಾದ ವಿದ್ವಾಂಸರಿಗೆ ಹೆಚ್ಚು ಗೌರವವಿರುವುದು. ಡಾ। ಪಿಶ್ಚೆಲ್ (Dr. Pischel) ಮೊದಲಾದ ಕೆಲವರು, ವಂಗೀಯ ಮಾತೃಕೆಗಳು ಚೆನ್ನಾಗಿವೆಯೆಂದು ಹೇಳುವರು. ಪಾಠನ್‌ಕರ್ ಎಂಬವರು ದಾಕ್ಷಿಣಾತ ಮಾತೃಕೆಗಳೇ ವಿಶ್ವಸನೀಯವೆಂದು ವಾದಿಸುವರು. ಹೀಗೆ ಬೇರೆ ಬೇರೆ ಮಾತೃಕೆಗಳ ವಿಶ್ವಾಸಾರ್ಹತೆಯ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ.

ವಂಗೀಯ ಮಾತೃಕೆಗಳಿಗೂ ಇತರ ಮಾತೃಕೆಗಳಿಗೂ ಇರುವ ಕೆಲವು ವ್ಯತ್ಯಾಸಗಳು ಯಾವುವೆಂದರೆ: —

(೧) ಮೂರನೆಯ ಅಂಕದಲ್ಲಿ (i) ನಾಯಿಕಾನಾಯಕರ ಪರಸ್ಪರಾವಲೋಕನಪ್ರಸಕ್ತಿಯಲ್ಲಿ ಶಕುಂತಲೆಯು ಕುಳಿತಿದ್ದ ಶಿಲಾಪೀಠದ ಮೇಲೆಯೇ ಸಮೀಪದಲ್ಲಿ ಕುಳಿತುಕೊಳ್ಳಲು ದುಃಷ್ಯಂತನು ಅಪ್ಪಣೆಯನ್ನು ಬೇಡಿದಂತಿರುವುದು. ಇದು ಇತರ ಮಾತೃಕೆಗಳಲ್ಲಿ ಕಂಡುಬರುವುದಿಲ್ಲ. ಇದೂ ಅಲ್ಲದೆ ಈ ಭಾಗವು ದುಷ್ಯಂತನ ಸಹಜಗಾಂಭೀರ್ಯೋದಾತ್ತತೆಗಳಿಗೆ ಕುಂದನ್ನುಂಟುಮಾಡುವಂತಿದೆ. (ii) ತನ್ನ ಸಖಿಯರೊಡನೆ ಹೊರಟುಹೋಗಿದ್ದ ಶಕುಂತಲೆಯು ಪುನಃ ದುಷ್ಯಂತನನ್ನು ಸಂಧಿಸಿ ಬಳಿಕ ಹೊರಟು ಹೋದಂತೆಯೂ, ಮತ್ತೊಂದುಸಾರಿ ಪುಷ್ಪಕಂಕಣವನ್ನು ಹುಡುಕುವ ನೆಪದಿಂದ ಬಂದು ಆ ಹೂಗಂಕಣವನ್ನು ಹಿಡಿದಿದ್ದ ದುಷ್ಯಂತನನ್ನು ನೋಡಿ ಮಾತನಾಡುತ್ತಿದ್ದಳೆಂದೂ, ಅನೇಕ ವಂಗೀಯ ಮಾತೃಕೆಗಳಲ್ಲಿರುವುದು. ಇವುಗಳಲ್ಲಿ ಈ ಭಾಗವು ನಾಗರ ದಾಕ್ಷಿಣಾತ ಮಾತೃಕೆಗಳಲ್ಲಿರುವುದಕ್ಕಿಂತ ಸಾಲ್ಕೈದರಷ್ಟು ಹೆಚ್ಚಾಗಿರುವುದು. ಆದರೆ ಈ ಅಧಿಕ ಪಾಠದಿಂದ ಶಕುಂತಲೆಯ ಲಜ್ಜಾಸ್ವಭಾವಕ್ಕೆ ವಿರುದ್ಧತೆಯು ತೋರಿಬರುವುದು.

(೨) ಕೆಲವು ಹೊಸ ಶ್ಲೋಕಗಳು ವಂಗೀಯ ಮಾತೃಕೆಗಳಲ್ಲಿ ಕಂಡುಬರುವುವು. ಆದರೆ ಇವುಗಳಲ್ಲಿ ಕಾಳಿದಾಸನ ಸಹಜವಾದ ಶಬ್ದಲಾಲಿತ್ಯವಾಗಲೀ ಭಾವಕೋಮಲತೆಯಾಗಲೀ ಕಂಡುಬರುವುದಕ್ಕೆ ಪ್ರತಿ

ಯಾಗಿ, ಶಬ್ದಬಾಹುಳ್ಯವೂ ಶಿಥಿಲಬಂಧವೂ ಭಾವನೀರಸತೆಯೂ ತೋರಿಬರುವುವು.

(೩) ವಂಗೀಯ ಮಾತೃಕೆಗಳಲ್ಲಿ ಬರುವ ಪಾತ್ರಗಳ ಹೆಸರುಗಳೂ ರೂಪಾಂತರವನ್ನು ತೋರ್ಪಡಿಸುವುವು. ಉದಾ:-ಅನುಸೂಯಾ, ದುಷ್ಮಂತ, ಧನವೃದ್ಧಿ (ಧನಮಿತ್ರನಿಗೆ ಪ್ರತಿ), ಪಾರ್ವತಾಯನ (ವಾತಾಯನನಿಗೆ ಪ್ರತಿ), ಪಿಂಗಳಿಕಾ (ತರಳಿಕೆಗೆ ಪ್ರತಿ), ಸಂಕೋಚನ (ಮಾರ್ಕಂಡೇಯನಿಗೆ ಪ್ರತಿ).

ಒಂದೇ ವರ್ಗದ ಬೇರೆ ಬೇರೆ ಮಾತೃಕೆಗಳಿಗೂ ಅನೇಕ ವ್ಯತ್ಯಾಸಗಳು ಕಂಡುಬರುವುವು. ಆದರೆ ಇವು ಪ್ರಾಯಶಃ ಶಬ್ದಪ್ರಯೋಗ ಸಂಬಂಧವಾದುವೇ ಹೊರತು ವಿಷಯಸಂಬಂಧವಾದುವಲ್ಲ.

## ೪. ಶಾಕುಂತಲ ನಾಟಕ ಕಥಾಮೂಲ

ಈ ನಾಟಕದ ಕಥೆಯು ಮಹಾಭಾರತದ ಆದಿಪರ್ವದಲ್ಲಿ ಇರುವುದು. ಪದ್ಮಪುರಾಣದಲ್ಲಿಯೂ, ಸ್ವರ್ಗಖಂಡದ ಮೊದಲೈದು ಅಧ್ಯಾಯಗಳಲ್ಲಿ ಒಂದು ಶಕುಂತಲೋಪಾಖ್ಯಾನವು ಕಾಣಬರುವುದು. ಆದರೆ ಈ ಖಂಡವೇ ಪದ್ಮಪುರಾಣದ ಕೆಲವು ಪ್ರತಿಗಳಲ್ಲಿ ಕಾಣಬರುವುದಿಲ್ಲವಾದುದರಿಂದಲೂ, ಪದ್ಮಪುರಾಣವು ಕಾಳಿದಾಸನ ಕಾಲದಿಂದ ಈಚೆಗೆ ಹುಟ್ಟಿದುದೆಂಬ ಅಭಿಪ್ರಾಯವಿರುವುದರಿಂದಲೂ, ಪದ್ಮಪುರಾಣಸ್ಥವಾದ ಈ ಉಪಾಖ್ಯಾನವು ನಾಟಕದ ಕಥೆಯಂತೆಯೇ ಇರುವುದರಿಂದಲೂ, ಇದು ಯಾರೋ ಒಬ್ಬ ಆಧುನಿಕನಿಂದ ರಚಿತವಾಗಿ ಪದ್ಮಪುರಾಣದಲ್ಲಿ ಪ್ರಕ್ಷಿಪ್ತವಾಗಿರುವುದೆಂದು ಊಹಿಸಲು ಅವಕಾಶವಿರುವುದು. ಆದುದರಿಂದ ಶಾಕುಂತಲ ನಾಟಕಕ್ಕೆ ಮಹಾಭಾರತದ ಆದಿಪರ್ವದಲ್ಲಿರುವ ಶಕುಂತಲೋಪಾಖ್ಯಾನವೇ ಮೂಲವೆಂಬುದು ಬಹುಜನ ವಿದ್ವಾಂಸರಿಗೆ ಅಭಿಮತವಾದ ಅಭಿಪ್ರಾಯವಾಗಿದೆ.

**ಮಹಾಭಾರತದ ಶಕುಂತಲೋಪಾಖ್ಯಾನ ಸಂಗ್ರಹ**—ಹಸ್ತಿನಾಪುರದ ಅರಸನಾದ ದುಷ್ಯಂತಮಹಾರಾಜನು ಒಂದಾನೊಂದು ದಿನ

ಚತುರಂಗ ಬಲಸಮೇತನಾಗಿ ಸಕಲ ಸನ್ನಾಹಗಳೊಡನೆ ಮೃಗಯಾ ವಿಹಾರಕ್ಕಾಗಿ ಹೊರಟು ಅನೇಕಾರಣ್ಯಗಳಲ್ಲಿ ಸಂಚರಿಸಿ ಬಗೆಬಗೆಯ ಸಾವಿರಾರು ಮೃಗಗಳನ್ನು ಸಂಹರಿಸಿ ಮತ್ತೊಂದು ವನವನ್ನು ಪ್ರವೇಶಿಸಿದನು. ಸಿದ್ಧ ಚಾರಣ ಕಿನ್ನರ ಗಂಧರ್ವಾಪ್ಸರೋಗಣಗಳಿಗೆ ಆವಾಸ ಸ್ಥಾನವಾಗಿದ್ದ ಆ ವನದ ಒಂದು ಪ್ರದೇಶದಲ್ಲಿ ಮಾಲಿನೀನದಿಯು ಪ್ರವಹಿಸುತ್ತಿದ್ದಿತು. ಈ ಪ್ರಾಂತದಲ್ಲಿ ಕಾಶ್ಯಪಗೋತ್ರೋದ್ಭವರಾದ ಕಣ್ವಮಹರ್ಷಿಗಳ ಆಶ್ರಮವಿದ್ದಿತು. ತನ್ನ ಸೈನಿಕರನ್ನೂ ಪರಿಜನರನ್ನೂ ತಾನು ಬರುವವರೆಗೂ ಕಾದಿರುವಂತೆ ನೇಮಿಸಿ ಅವರನ್ನು ಆಶ್ರಮದ ಹೊರವಳಯದಲ್ಲಿಯೇ ನಿಲ್ಲಿಸಿ ತನ್ನ ಮಂತ್ರಿ ಪುರೋಹಿತರನ್ನು ಮಾತ್ರ ಒಡನೆ ಕರೆದುಕೊಂಡು ದುಷ್ಯಂತನು ಕಣ್ವಾಶ್ರಮವನ್ನು ಪ್ರವೇಶಿಸಿದನು. ತಪೋವನದಲ್ಲಿ ಸ್ನಾನಸಂಧ್ಯಾಜಪತಪೋನುಷ್ಠಾನ ನಿರತರಾಗಿಯೂ ವೇದವೇದಾಂಗಾದಿ ವಿಷಯಗಳನ್ನು ವಿಚಾರಮಾಡುತ್ತಲೂ ಇದ್ದ ಅನೇಕ ಮುನಿಜನರನ್ನು ನೋಡಿ ಸಂತೋಷಿಸುತ್ತಾ ಮುಂದೆ ಹೊರಟು, ಕಣ್ವಮುನಿಪತಿಗಳ ಕುಟೀರಪ್ರಾಂತದ ಬಳಿಗೆ ಬಂದನು. ಆಗ ತನ್ನೊಡನೆ ಇದ್ದ ಮಂತ್ರಿ ಪುರೋಹಿತರನ್ನು ಆ ಪ್ರದೇಶದಲ್ಲಿಯೇ ನಿಲ್ಲಿಸಿ ತಾನುಮಾತ್ರ ಪರ್ಣಶಾಲೆಯ ಬಳಿಗೆ ಹೋದನು.

ಅದರ ಹೊರಗಡೆಯಲ್ಲಿ ಯಾರೂ ಕಂಡುಬಾರದಿದ್ದುದರಿಂದ, "ಯಾರು ಒಳಗೆ?" ಎಂದು ಕೂಗಿದನು. ಆಗ ಒಳಗಿನಿಂದ ತಾಪಸಿಯ ಉಡುಪನ್ನು ಧರಿಸಿದ್ದ ಶಕುಂತಲೆಯು ಈಚೆಗೆ ಬಂದು ಆ ಅಭ್ಯಾಗತನನ್ನು ದುಷ್ಯಂತನೆಂದು ತಿಳಿದು ಆತನನ್ನು ಅರ್ಘ್ಯಪಾದ್ಯಾದಿಗಳಿಂದ ಉಪಚರಿಸಿ ಉಚಿತಪೀಠದಲ್ಲಿ ಕುಳ್ಳಿರಿಸಿ ಕುಶಲಪ್ರಶ್ನೆಯನ್ನು ಕೇಳಿದಳು. ಆತನ ಉತ್ತರವನ್ನು ಕೇಳಿದ ಬಳಿಕ ಆಕೆಯು–"ನಮ್ಮ ತಂದೆಯವರಾದ ಕಣ್ವಮಹರ್ಷಿಗಳು ಫಲಗಳನ್ನು ಸಂಗ್ರಹಿಸಿಕೊಂಡು ಬರಲು ವನಕ್ಕೆ ಹೋಗಿರುವರು, ಸ್ವಲ್ಪ ಹೊತ್ತಿನಲ್ಲಿಯೇ ಹಿಂದಿರುಗಿ ಬರುವರು, ಅಲ್ಲಿಯವರೆಗೂ ಇಲ್ಲಿ ಕುಳಿತು ಸ್ವಲ್ಪ ವಿಶ್ರಮಿಸಿಕೊಳ್ಳಬಹುದು" ಎಂದಳು.

ದುಷ್ಯಂತನು ಶಕುಂತಲೆಯ ಮನೋಹರಾಕಾರವನ್ನು ಕಂಡು ಕುತೂಹಲಿತಾಂತರಂಗನಾಗಿ "ಸುಂದರಿಯೆ! ನೀನು ಯಾರು? ಈ

ವನಕ್ಕೇಕೆ ಬಂದೆ? ಬ್ರಹ್ಮಚಾರಿಗಳಾದ ಕಣ್ವರು ನಿನಗೆ ತಂದೆಯುವರು ಎಂಬುದು ಹೇಗೆ?" ಎಂದು ಕೇಳಿದನು. ಹಿಂದೆ ಇದೇ ವಿಷಯವಾಗಿ ಕೇಳಿದ್ದ ಒಬ್ಬ ಮುನಿಗೆ ಕಣ್ವರು ತನ್ನ ಜನನವೃತ್ತಾಂತವನ್ನು ವಿವರಿಸಿದ್ದುದನ್ನು ಶಕುಂತಲೆಯು ಕೇಳಿದ್ದುದರಿಂದ, ಅದನ್ನು ಯಥಾಶ್ರುತವಾಗಿಯೂ ವಿಸ್ತಾರವಾಗಿಯೂ ಆತನಿಗೆ ವಿವರಿಸಿದಳು. ವಿಶ್ವಾಮಿತ್ರನ ತಪೋಭಂಗಕ್ಕಾಗಿ ಇಂದ್ರನಿಂದ ಪ್ರೇರಿತಳಾದ ಮೇನಕೆಯು ಬಂದು ತನ್ನ ರೂಪಾತಿಶಯದಿಂದ ವಿಶ್ವಾಮಿತ್ರನನ್ನು ವಶಪಡಿಸಿಕೊಂಡುದನ್ನೂ, ವಿಶ್ವಾಮಿತ್ರಮೇನಕೆಯರ ಪುತ್ರಿಯೇ ತಾನೆಂಬುದನ್ನೂ, ಶೈಶವದಲ್ಲಿಯೇ ಮೇನಕೆಯು ತನ್ನನ್ನು ತ್ಯಜಿಸಿ ಹೊರಟುಹೋದುದನ್ನೂ, ಆಗ ಶಕುಂತ (ಪಕ್ಷಿ)ಗಳು ತನ್ನನ್ನು ರಕ್ಷಿಸಿದುದರಿಂದ ತನಗೆ ಶಕುಂತಲೆಯೆಂದು ಹೆಸರಾದುದನ್ನೂ ಆಕೆಯಿಂದ ತಿಳಿದವನಾಗಿ, ಆಕೆಯ ಮೋಹಜನಕವಾದ ರಮಣೀಯಾಕಾರದಿಂದ ಮೊದಲೇ ಮುಗ್ಧನಾಗಿ ಹೋಗಿದ್ದ ದುಷ್ಯಂತನು ಪ್ರಣಯಪಾಶಕ್ಕೆ ಸಿಕ್ಕಿ, ತನ್ನನ್ನು ಗಾಂಧರ್ವವಿಧಿಯಿಂದ ಪತಿಯನ್ನಾಗಿ ಪರಿಗ್ರಹಿಸಬೇಕೆಂದೂ, ಆಕೆಗೆ ವಸ್ತ್ರಾಭರಣಾದಿಗಳನ್ನು ಕೊಡುವೆನೆಂದೂ, ತನ್ನ ರಾಜ್ಯವೆಲ್ಲವೂ ಆಕೆಯ ವಶವಾಗುವುದೆಂದೂ ಹೇಳಿಕೊಂಡನು. ಕಣ್ವರು ಬಂದ ಮೇಲೆ ಅವರಿಂದ ಅನುಮತಿಪಡೆದು, ಬಳಿಕ ತನ್ನನ್ನು ಪತ್ನಿಯಾಗಿ ಪರಿಗ್ರಹಿಸಬಹುದೆಂದು ಶಕುಂತಲೆಯು ಹೇಳಿದಳು. ಆದರೆ ದುಷ್ಯಂತನು ಆಕೆಗೆ ಅಷ್ಟವಿಧ ವಿವಾಹಲಕ್ಷಣಗಳನ್ನು ತಿಳಿಸಿ ಆಕೆಯೇ ಸ್ವತಂತ್ರಿಸಿ ತನ್ನನ್ನು ಗಾಂಧರ್ವವಿಧಿಯಿಂದ ವರಿಸುವುದು ಶಾಸ್ತ್ರಸಮ್ಮತವಾದುದೆಂದು ಬೋಧಿಸಿದನು. ಹಾಗಾದರೆ, ತನ್ನ ಗರ್ಭದಲ್ಲಿ ಜನಿಸುವ ಪುತ್ರನಿಗೆ ಯುವರಾಜ ಪದವಿಯನ್ನು ಕೊಡುವ ಪಕ್ಷದಲ್ಲಿ ತಾನು ಮದುವೆಯಾಗುವುದಾಗಿ ಶಕುಂತಲೆಯು ತಿಳಿಸಿದಳು. ಈ ನಿಬಂಧನೆಗೆ ದುಷ್ಯಂತನು ಒಪ್ಪಲು, ಅವರಿಬ್ಬರಿಗೂ ಗಾಂಧರ್ವ ವಿವಾಹವು ನಡೆಯಿತು. ಆ ಬಳಿಕ ದುಷ್ಯಂತನು ತನ್ನ ಚತುರಂಗ ಬಲವನ್ನು ಕಳುಹಿಸಿ ಶಕುಂತಲೆಯನ್ನು ತನ್ನ ರಾಜಧಾನಿಗೆ ಕರೆಯಿಸಿಕೊಳ್ಳುವುದಾಗಿ ಪುನಃಪುನಃ ವಾಗ್ದಾನಮಾಡಿ, ಆಕೆಯನ್ನು ಒಪ್ಪಿಸಿ ತನ್ನ ರಾಜಧಾನಿಯ ಮಾರ್ಗವನ್ನು ಹಿಡಿದನು. ಕಣ್ವಮಹರ್ಷಿಗಳು

ಆಶ್ರಮಕ್ಕೆ ಹಿಂದಿರುಗಿ ಬಂದು ತಮ್ಮ ವಿವಾಹ ವಿಷಯದಲ್ಲಿ ಏನೆನ್ನು ವರೋ ಎಂದು ದುಷ್ಯಂತನು ಭಾವಿಸಿಕೊಳ್ಳುತ್ತ ತನ್ನ ರಾಜಧಾನಿಗೆ ಬಂದು ಸೇರಿದನು. ಆದರೆ ರಾಜಧಾನಿಗೆ ಬಂದಕೂಡಲೆ ಶಕುಂತಲೆಯ ವಿಚಾರದಲ್ಲಿ ತಾನು ಮಾಡಿದ್ದ ವಾಗ್ದಾನವನ್ನು ಉಪೇಕ್ಷಿಸಿ ಆಕೆಯನ್ನು ತನ್ನ ಬಳಿಗೆ ಕರೆಯಿಸಿಕೊಳ್ಳದೆ ಹೋದನು.

ದುಷ್ಯಂತನು ಆಶ್ರಮವನ್ನು ಬಿಟ್ಟು ಹೊರಟಕೂಡಲೆ ಕಣ್ವರೂ ಆಶ್ರಮಕ್ಕೆ ಬಂದರು. ಆದರೆ ಹಿಂದಿರುಗಿಬಂದ ಕಣ್ವರನ್ನು ಲಜ್ಜಾನ್ವಿತಳಾದ ಶಕುಂತಲೆಯು ಎಂದಿನಂತೆ ಇದಿರುಗೊಳ್ಳಲಿಲ್ಲ. ಇದರಿಂದಲೂ ತಮ್ಮ ಜ್ಞಾನದೃಷ್ಟಿಯ ಮಾಹಾತ್ಮ್ಯದಿಂದಲೂ ಶಕುಂತಲೆಗೆ ವಿವಾಹವಾಗಿದ್ದ ವೃತ್ತಾಂತವನ್ನೂ, ಆಕೆಯು ಗರ್ಭಿಣಿಯಾಗಿದ್ದ ಸಂಗತಿಯನ್ನೂ ಕಣ್ವರು ಕರತಲಾಮಲಕದಂತೆ ತಿಳಿದು, ಆ ವಿವಾಹಕ್ಕೆ ಅನುಮತಿಸಿ ಆಕೆಗೆ ಉಂಟಾಗಿದ್ದ ಭಯಸಂಶಯಗಳನ್ನು ಪರಿಹಾರ ಮಾಡಿದರು. ಇದರಿಂದ ಶಕುಂತಲೆಯು ಹರ್ಷಿತಳಾಗಿ ಕಣ್ವಮಹರ್ಷಿಗಳಿಗೆ ಕಾಲುಗಳನ್ನು ತೊಳೆದುಕೊಳ್ಳಲು ನೀರನ್ನು ಕೊಟ್ಟು ಅವರನ್ನು ಉಪಚರಿಸಿದಳು. ಕಣ್ವರು ಆಕೆಯನ್ನೂ ದುಷ್ಯಂತನನ್ನೂ ಹರಸಿದುದಲ್ಲದೆ ಆಕೆಯ ಗರ್ಭದಲ್ಲಿದ್ದ ಪುತ್ರನು ಚಕ್ರವರ್ತಿಯಾಗುವನೆಂದು ತಿಳಿಸಿದರು.

ಸಕಾಲದಲ್ಲಿ ಶಕುಂತಲೆಯು ಶುಭಲಕ್ಷಣಾನ್ವಿತನಾದ ಒಬ್ಬ ಪುತ್ರನನ್ನು ಪಡೆದಳು. ದಿನದಿನಕ್ಕೂ ಪ್ರವರ್ಧಮಾನನಾಗಿ ಬಳೆಯುತ್ತಿದ್ದ ಆ ಬಾಲಕನು ತನ್ನ ಅಪಾರವಾದ ಶೌರ್ಯ ಧೈರ್ಯಗಳಿಂದ ಆ ವನದಲ್ಲಿದ್ದ ಸಿಂಹ ಶಾರ್ದೂಲ ಗಜಭಲ್ಲೂಕಾದಿ ಮೃಗಗಳನ್ನು ಲೀಲಾಜಾಲವಾಗಿ ನಿಗ್ರಹಿಸುತ್ತಿದ್ದುದರಿಂದ ಈ ಬಾಲಕನಿಗೆ "ಸರ್ವದಮನ" ಎಂದು ಆ ತಪೋವನದಲ್ಲಿ ಹೆಸರಾಯಿತು.

ಸರ್ವದಮನನಿಗೆ ಆರು ವರ್ಷಗಳ ವಯಸ್ಸಾಯಿತು. ಈ ಸಮಯದಲ್ಲಿ, ವಿವಾಹಿತಳಾದ ಪುತ್ರಿಯು ತಂದೆಯ ಮನೆಯಲ್ಲಿಯೇ ಬಹಳ ಕಾಲವಿರುವುದು ಯುಕ್ತವಲ್ಲವೆಂದೂ, ಸರ್ವದಮನನಿಗೆ ಯೌವರಾಜ್ಯಾಭಿಷೇಕಕ್ಕೆ ಕಾಲವು ಸಮೀಪಿಸಿತೆಂದೂ ಭಾವಿಸಿ ಕಣ್ವರು ತಮ್ಮ ಕೆಲವರು ಶಿಷ್ಯರನ್ನು ಜೊತೆಮಾಡಿ ತಮ್ಮ ಪಾಲಿತಪುತ್ರಿಯನ್ನೂ ದೌಹಿತ್ರನನ್ನೂ

ದುಷ್ಯಂತನ ಬಳಿಗೆ ಕಳುಹಿಸಿಕೊಟ್ಟರು. ಅದೇ ಮೇರೆಗೆ ಆ ಶಿಷ್ಯರು ಶಕುಂತಲಾಸರ್ವದಮನರನ್ನು ಹಸ್ತಿನಾವತಿಗೆ ಕರೆತಂದು ದೊರೆಗೆ ತಿಳಿಸಿ ಅವರನ್ನು ಆತನ ಆಸ್ಥಾನದಲ್ಲಿ ಬಿಟ್ಟು ಹಿಂದಿರುಗಿದರು. ಶಕುಂತಲೆಯು ದುಷ್ಯಂತನನ್ನು ಕುರಿತು, "ಆರ್ಯನೇ! ಈ ಬಾಲಕನು ನಿನ್ನ ಪುತ್ರನು, ನಿನ್ನ ವಾಗ್ದಾನದಂತೆ ಸರ್ವದಮನನೆಂಬ ಈ ಬಾಲಕನಿಗೆ ಯುವರಾಜ ಪಟ್ಟವನ್ನು ದಯಪಾಲಿಸು" ಎಂದು ಕೇಳಿಕೊಂಡಳು. ಆದರೆ ದುಷ್ಯಂತನು ಶಕುಂತಲೆಯನ್ನೂ ಸರ್ವದಮನನನ್ನೂ ತನ್ನ ಪತ್ನೀಪುತ್ರರನ್ನಾಗಿ ಅಂಗೀಕರಿಸದೆ ಹೋದನು.

ಶಕುಂತಲೆಯು ಎಷ್ಟೆಷ್ಟು ಜ್ಞಾಪಿಸಿದರೂ ದುಷ್ಯಂತನು ಆಕೆಯನ್ನು ವಿವಾಹ ಮಾಡಿಕೊಂಡ ನೆನೆಪೇ ತನಗೆ ಇಲ್ಲವೆಂದು ಸಾಧಿಸುತ್ತ ಬಂದನು. ಕೈಹಿಡಿದ ಪತ್ನಿಯನ್ನೂ ಕುಲೋದ್ಧಾರಕನಾದ ಪುತ್ರನನ್ನೂ ಬಿಡುವುದು ಉಚಿತವಲ್ಲವೆಂದೂ, ಸರ್ವದಮನನು ಶತಾಶ್ವಮೇಧಗಳನ್ನು ಮಾಡುವುದಾಗಿ ಆಕಾಶವಾಣಿಯಾಗಿದ್ದಿತೆಂದೂ, ಬಾಲ್ಯದಲ್ಲಿ ಮಾತಾಪಿತೃಗಳಿಂದ ಪರಿತ್ಯಕ್ತಳಾಗಿದ್ದ ತನ್ನನ್ನು ಮನಃಪೂರ್ವಕವಾಗಿ ವರಿಸಿದ್ದ ದುಷ್ಯಂತನು ಬಿಡುವುದು ತರವಲ್ಲವೆಂದೂ, ಆಕೆಯು ಬಗೆಬಗೆಯಾಗಿ ತಿಳಿಯಹೇಳಿದಳು. ದುಷ್ಯಂತನಾದರೋ ಆಕೆಯ ಮಾತುಗಳಿಗೆ ಕಿವಿಗೊಡದೆ ಅಷ್ಟು ದೊಡ್ಡವನಾಗಿ ಬಳೆದಿದ್ದ ಹುಡುಗನು ತನ್ನ ಪುತ್ರನಲ್ಲವೆಂದೂ, ಶಕುಂತಲೆಯ ಮಾತುಗಳೆಲ್ಲವೂ ಸುಳ್ಳೆಂದೂ, ಆಕೆಯನ್ನೂ ಆಕೆಯ ಮಾತಾಪಿತೃಗಳನ್ನೂ ಹೀಯಾಳಿಸುತ್ತ ಬಂದನು. ಶಕುಂತಲೆಯು, ಇತರರಲ್ಲಿ ಕಂಡುಬರುವ ಗುಣಾಂಶಗಳನ್ನು ತುಚ್ಛೀಕರಿಸಿ ದುರ್ಗುಣಗಳನ್ನು ಹುಡುಕಿಕೊಂಡು ಹೋಗುವುದು ಯುಕ್ತವಲ್ಲವೆಂದೂ ಶತಾಶ್ವಮೇಧಗಳಿಗಿಂತಲೂ ಶ್ರೇಷ್ಠವಾದ ಸತ್ಯವನ್ನು ಹಾಗೆ ಒತ್ತರಿಸುವುದು ಸರಿಯಲ್ಲವೆಂದೂ ಪುನಃ ಪುನಃ ಬೋಧಿಸಿದಳು. ಇಷ್ಟಾದರೂ ದುಷ್ಯಂತನು ಅವರನ್ನು ಅಂಗೀಕರಿಸಲಿಲ್ಲ. ಆದುದರಿಂದ "ನೀನು ನನ್ನ ಮಾತನ್ನು ನಂಬದಿದ್ದರೆ ನಾನು ಹೊರಟು ಹೋಗುವೆನು; ಆದರೆ ನಿನ್ನ ಬಳಿಕ ಈ ಬಾಲಕನೇ ರಾಜ್ಯಕ್ಕೆ ಚಕ್ರವರ್ತಿಯಾಗುವನೆಂಬುದನ್ನು ತಿಳಿದಿರು" ಎಂದು ಹೇಳಿ ಆಸ್ಥಾನವನ್ನು ಬಿಟ್ಟು ಹೊರಟಳು. ಅಷ್ಟರಲ್ಲಿ "ಶಕುಂತಲೆಯು ನಿನ್ನ ಪತ್ನಿಯೇ

ಹೌದು; ಈ ಬಾಲಕನು ನಿನ್ನ ಪುತ್ರನೇ ಹೌದು. ನೀನು ಭರಿಸು (ಪೋಷಿಸು)ವುದರಿಂದ ಇವನು ಭರತನೆಂಬ ಹೆಸರಿನಿಂದ ಪ್ರಸಿದ್ಧನಾಗಿ ಭರತಖಂಡದ ಸಾರ್ವಭೌಮನಾಗುವನು. ಇವನನ್ನೂ ಶಕುಂತಲೆಯನ್ನೂ ಬಿಡತಕ್ಕುದು ಯುಕ್ತವಲ್ಲ" ಎಂದು ಅಶರೀರ ವಾಣಿಯೊಂದು ಕೇಳ ಬಂದುದರಿಂದ ದುಷ್ಯಂತನು ತನ್ನ ಪತ್ನೀಪುತ್ರರನ್ನು ಅಂಗೀಕರಿಸಿದನು. ಅಲ್ಲದೆ, ತನ್ನ ಸದಸ್ಯರನ್ನು ಕುರಿತು—"ಲೋಕಾಪವಾದ ಭೀತಿಯಿಂದ ಇವರನ್ನು ಹಾಗೆ ನಿರಾಕರಿಸಿದೆನೇ ಹೊರತು ಮನಃಪೂರ್ವಕವಾಗಿ ಹಾಗೆ ಮಾಡಲಿಲ್ಲ" ಎಂದು ಹೇಳಿ, ತನ್ನ ಪತ್ನೀಪುತ್ರರನ್ನೂ ಸಮಾಧಾನಪಡಿಸಿದನು. ಇವರೂ ಆತನ ಮಾತುಗಳಿಂದ ಸಂತುಷ್ಟರಾದರು. ಶಕುಂತಲಾ ದುಷ್ಯಂತರು ಪರಸ್ಪರ ಪ್ರೀತಿಯಿಂದ ಬಹುಕಾಲ ಸುಖವಾಗಿದ್ದರು. ಉಚಿತಕಾಲದಲ್ಲಿ ಭರತನೂ ಚಕ್ರವರ್ತಿಯಾಗಿ, ಕಣ್ವಮಹರ್ಷಿಗಳ ಸಹಾಯದಿಂದ ಶತಾಶ್ವಮೇಧಗಳನ್ನೂ ಇನ್ನೂ ಅನೇಕ ಯಜ್ಞಗಳನ್ನೂ ನಡೆಯಿಸಿ, ಅಖಂಡಭೂಮಂಡಲಾಧಿಪತಿಯಾಗಿ ಬಹುಕಾಲ ಸುಖವಾಗಿ ರಾಜ್ಯಭಾರವನ್ನು ಮಾಡಿಕೊಂಡಿದ್ದನು.

## ೫. ಶಾಕುಂತಲನಾಟಕ ಕಥಾಸಂಗ್ರಹ

ಈಗ ನಾಟಕದ ಕಥಾಸರಣಿಯ ಕಡೆಗೆ ಸ್ವಲ್ಪ ಗಮನಿಸೋಣ.

**ಮೊದಲನೆಯ ಅಂಕ:**—ಒಂದಾನೊಂದು ಕಾಲದಲ್ಲಿ ದುಷ್ಯಂತನು ಮೃಗಯಾವಿಹಾರಮಾಡುತ್ತಿದ್ದಾಗ ಒಂದು ಜಿಂಕೆಯನ್ನುವೇಗವಾಗಿ ಬೆನ್ನಟ್ಟಿಕೊಂಡು ಹೊರಟನು. ಆ ಜಿಂಕೆಯು ಇನ್ನೇನು ಸಿಕ್ಕಿಬಿದ್ದಿತು ಎಂಬಂತೆ ಕಾಣಿಸಿಕೊಳ್ಳುತ್ತಾ ಪ್ರಾಣಭಯದಿಂದ ಓಡಿ ಓಡಿ ಹೋಗುತ್ತಾ ಮಾಲಿನೀತೀರದ ಕಣ್ವಾಶ್ರಮವನ್ನು ಸೇರಿತು. ದುಷ್ಯಂತನು ಅದಕ್ಕೆ ಬಾಣಪ್ರಯೋಗಮಾಡಬೇಕೆಂದು ಸಿದ್ಧನಾಗಿದ್ದಾಗ ಆ ಆಶ್ರಮವಾಸಿಯಾದ ಒಬ್ಬ ವೈಖಾನಸನು ತನ್ನ ಶಿಷ್ಯರುಗಳನ್ನು ಕರೆದುಕೊಂಡು ಬರುತ್ತಿದ್ದನು. ಅತನು ದುಷ್ಯಂತನಿಗೆ ಕಾಣಿಸಿಕೊಂಡು, "ಇದು ಕಣ್ವಾಶ್ರಮದ ಮೃಗ; ಆರ್ತತ್ರಾಣಪರಾಯಣವಾದ ನಿನ್ನ ಬಾಣವು ಈ ಆಶ್ರಮ ಮೃಗ

ವನ್ನು ಕೊಲ್ಲಲು ಅರ್ಹವಲ್ಲ" ಎಂದು ಹೇಳಿದ ಕೂಡಲೆ ಆತ್ಮ ಸಂಯಮಿಯಾದ ದುಷ್ಯಂತನು ಮೃಗವಧೋದ್ಯೋಗವನ್ನು ಬಿಟ್ಟುಬಿಟ್ಟನು. ಆ ಆಶ್ರಮವನ್ನು ಸಂದರ್ಶಿಸಿಕೊಂಡುಬರುವುದಕ್ಕಾಗಿ ಆತನು ರಥದಿಂದಿಳಿದು ಯಥೋಚಿತವಾದ ಉಡುಪುಗಳನ್ನು ಧರಿಸಿ ಏಕಾಂಗಿಯಾಗಿ ಹೊರಟು ಕಣ್ವಮಹರ್ಷಿಗಳ ಕುಟೀರದ ಕಡೆಗೆ ಹೋಗುತ್ತಿದ್ದನು. ಆ ಋಷಿವರ್ಯರು ತಮ್ಮ ಪಾಲಿತಪುತ್ರಿಯ ಪ್ರತಿಕೂಲ ಗ್ರಹಚಾರನಿವಾರಣಾರ್ಥವಾಗಿ ಸೋಮತೀರ್ಥಕ್ಕೆ ಹೋಗಿದ್ದ ವರ್ತಮಾನವನ್ನು ವೈಖಾನಸನಿಂದ ಕೇಳಿದ್ದ ಕಾರಣ, ಕಣ್ವರ ಪುತ್ರಿಯಾದ ಶಕುಂತಲೆಯನ್ನಾದರೂ ಸಂದರ್ಶನಮಾಡಿಕೊಂಡು ಬರಬೇಕೆಂಬ ಉದ್ದೇಶದಿಂದ ದುಷ್ಯಂತನು ಆಶ್ರಮದ ಕಡೆಗೆ ಹೊರಟನು.

ಹೀಗೆ ಹೋಗುತ್ತಿದ್ದಾಗ ತನಗೆ ಉಂಟಾದ ಬಾಹುಸ್ಪಂದಕ್ಕೆ ನಿಮಿತ್ತವೇನಿರಬಹುದೆಂದು ಆಶ್ಚರ್ಯಪಡುತ್ತಿರಲು, ಸಮೀಪದಲ್ಲೇ ಶಕುಂತಲೆಯು ತನ್ನ ಸಖಿಯರಾದ ಪ್ರಿಯಂವದಾನಸೂಯೆಯರೊಡನೆ ಗಿಡಬಳ್ಳಿಗಳಿಗೆ ನೀರೆರೆಯುತ್ತಾ ಸರಸಸಲ್ಲಾಪಗಳನ್ನು ಮಾಡುತ್ತಿದ್ದುದು ಕೇಳಬಂದಿತು. ಈ ತಾಪಸಕನ್ಯೆಯರ ಇದಿರಿಗೆ ಅಕಸ್ಮಾತ್ತಾಗಿ ಕಾಣಿಸಿಕೊಳ್ಳಲು ಇಚ್ಛೆಯಿಲ್ಲದೆ, ಅವರ ಮನೋಹರವಾದ ಸರಸಸಲ್ಲಾಪಗಳನ್ನು ಗಿಡಗಳ ಮರೆಯಲ್ಲಿ ನಿಂತು ಕೇಳಿ ಆನಂದಿಸುತ್ತಿದ್ದನು. ಹೀಗಿರುವಾಗ ಆತನಿಗೆ ಶಕುಂತಲೆಯಲ್ಲಿ ಪ್ರೇಮವು ಅಂಕುರಿಸಿತು. ಆದರೆ ಆಕೆಯು ಋಷಿಪುತ್ರಿಯಾಗಿದ್ದ ಪಕ್ಷದಲ್ಲಿ ತನ್ನ ಭಾವನೆಯು ಪಾಪಮಯವಾದೀತೆಂದು ಶಂಕಿಸುತ್ತಾ ಉತ್ಕೃಷ್ಟಕುಲಸಂಭೂತನಾದ ತನಗೆ ಅನುಚಿತವಾದ ಮನಃಪ್ರವೃತ್ತಿಯುಂಟಾಗುವುದು ಅಸಂಭವವೆಂದು ತನ್ನಲ್ಲಿ ತಾನೆ ಸಮಾಧಾನಪಟ್ಟುಕೊಳ್ಳುತ್ತಿದ್ದನು..

ಇಷ್ಟರಲ್ಲಿ ಶಕುಂತಲೆಯ ದೇಹಸೌರಭಮುಗ್ಧವಾದ ದುಂಬಿಯೊಂದು ಆಕೆಯ ಸುತ್ತಲೂ ಹಾರಾಡುತ್ತ ಆಕೆಯನ್ನು ಬಾಧಿಸತೊಡಗಿತು. ಸುಕುಮಾರಿಯಾದ ಶಕುಂತಲೆಯು ಅದರ ಬಾಧೆಯನ್ನು ತಡೆಯಲಾರದೆ ತನ್ನನ್ನು ರಕ್ಷಿಸಬೇಕೆಂದು ತನ್ನ ಸಖಿಯರನ್ನು ಪ್ರಾರ್ಥಿಸಲಾಗಿ ಅವರು, "ತಪೋವನಗಳೂ ರಾಜರಕ್ಷಿತವಾಗಿರುವುದರಿಂದ ದುಷ್ಯಂತನಲ್ಲಿ

ನೊರೆಯಿಡು" ಎಂದು ಹೇಳಿದರು. ಈ ಸಂಧಿಯಲ್ಲಿ ಆ ಸ್ತ್ರೀಯರ ಇದಿರಿಗೆ ದುಷ್ಯಂತನು ಕಾಣಿಸಿಕೊಂಡು ಭ್ರಮರಬಾಧೆಯನ್ನು ಪರಿಹರಿಸಿದನು. ಈತನನ್ನು ನೋಡಿದ ಕೂಡಲೆ ಶಕುಂತಲೆಯು "ಆಶ್ರಮೋಚಿತವಲ್ಲದ ವಿಕಾರ"ಕ್ಕೊಳಗಾದಳು. ಲಜ್ಜಾಭರವಿನಮಿತವದನಳಾದ ಶಕುಂತಲೆಯು ಈ ಅಭ್ಯಾಗತನೊಡನೆ ಮಾತನಾಡದಿದ್ದರೂ ಆಕೆಯ ಸಖಿಯರು ಆತನಿಗೆ ಅತಿಥಿ ಸತ್ಕಾರವನ್ನು ಮಾಡಿದರಲ್ಲದೆ ಪ್ರಸ್ತಾವವಶದಿಂದ ಶಕುಂತಲೆಯ ಜನನವೃತ್ತಾಂತವನ್ನೂ, ಕಣ್ವರು ಆಕೆಯನ್ನು ಉತ್ತಮ ಪಾತ್ರದಲ್ಲಿ ವಿನಿಯೋಗಿಸಬೇಕೆಂದಿದ್ದ ವಿಷಯವನ್ನೂ ತಿಳಿಸಿದರು. ಇದರಿಂದ ಶಕುಂತಲಾದುಷ್ಯಂತರಿಬ್ಬರಿಗೂ ಪರಸ್ಪರ ಪ್ರೇಮವು ಅಂಕುರಿಸಿ ರೂಢಮೂಲವಾಗುತ್ತಿರುವಷ್ಟರಲ್ಲಿ, ಒಂದು ಮತ್ತಗಜವು ಆಶ್ರಮವನ್ನು ಧ್ವಂಸಮಾಡುತ್ತಿದ್ದ ಭಯಂಕರ ವೃತ್ತಾಂತವು ತಿಳಿದು ಆ ಮೂವರು ಬಾಲೆಯರೂ ಕುಟೀರಕ್ಕೆ ಹೊರಟರು. ಶಕುಂತಲೆಯು ಮಾತ್ರ ಆ ಸ್ಥಳವನ್ನು ಬಿಟ್ಟು ಹೋಗಲು ಮನಸ್ಸಿಲ್ಲದೆ ಹಿಂದಕ್ಕೆ ತಿರುತಿರುಗಿ ರಾಜನ ಕಡೆ ನೋಡುತ್ತಾ ತನ್ನ ಸಖಿಯರೊಡನೆ ಪರ್ಣಶಾಲೆಯನ್ನು ಸೇರಿದಳು.

**ಎರಡನೆಯ ಅಂಕ**—ಮಹಾರಾಜನೊಡನೆ ಬಂದಿದ್ದ ವಿದೂಷಕನು ಬೇಟೆಯ ಕ್ಲೇಶಗಳಿಂದ ಬೇಸತ್ತು ದುಷ್ಯಂತನಿಗಿದ್ದ ಮೃಗಯಾಸಕ್ತಿಗಾಗಿ ತನ್ನ ಮನಸ್ಸಿನಲ್ಲಿಯೇ ವ್ಯಥೆಪಟ್ಟುಕೊಳ್ಳುತ್ತಿದ್ದನು. ಆದುದರಿಂದ, ದುಷ್ಯಂತನು ಬೇಟೆಯಿಂದ ಶಿಬಿರಕ್ಕೆ ಹಿಂದಿರುಗುತ್ತಿದ್ದಾಗ ಆತನಿಗೆ ಕಾಣಿಸಿಕೊಂಡು ಬೇಟೆಯನ್ನು ನಿಲ್ಲಿಸಬೇಕೆಂದು ಕೇಳಿಕೊಂಡನು.

ದುಷ್ಯಂತನಿಗೂ ಶಕುಂತಲೆಯಲ್ಲಿ ಮನಸ್ಸು ನೆಟ್ಟಿದ್ದುದರಿಂದ ಮೃಗಯಾವಿಹಾರದಲ್ಲಿ ಆಸಕ್ತಿಯು ಕಡಿಮೆಯಾಗಿದ್ದಿತು. ಆದುದರಿಂದ ತನ್ನ ಪರಿವಾರದವರಿಂದ ಆಶ್ರಮಕ್ಕೆ ಉಪದ್ರವ ಸಂಭವಿಸದಿರುವುದಕ್ಕಾಗಿ ಅವರೆಲ್ಲರನ್ನೂ ಋಷ್ಯಾಶ್ರಮಕ್ಕೆ ದೂರವಾಗಿ ನಿಲ್ಲಿಸುವಂತೆ ತನ್ನ ಸೇನಾಪತಿಗೆ ಆಜ್ಞಾಪಿಸಿದನು. ಇದಕ್ಕೆ ಮುಂಚೆಯೇ ತನ್ನ ಬಳಿಗೆ ಬಂದಿದ್ದ ವಿದೂಷಕನೊಡನೆ ಶಕುಂತಲೆಯ ವೃತ್ತಾಂತವನ್ನು ತಿಳಿಸಿ ಆಕೆಯನ್ನು ಪುನಃ ಕಾಣುವುದಕ್ಕೆ ಏನು ನೆವವೆಂದು ಯೋಚಿಸುತ್ತಿದ್ದಾಗ ಇಬ್ಬರು ಋಷಿಕುಮಾರರು ಕಾಣಿಸಿಕೊಂಡು, ಕಣ್ವಮಹರ್ಷಿಗಳು

ಆಶ್ರಮದಲ್ಲಿಲ್ಲದಿದ್ದುದನ್ನು ತಿಳಿದು ಕೆಲವರು ರಾಕ್ಷಸರು ತಮ್ಮ ಇಷ್ಟಿಗೆ ವಿಘ್ನಮಾಡುತ್ತಿರುವರೆಂದೂ, ತಮ್ಮ ಯಜ್ಞವನ್ನು ಕಾಪಾಡಬೇಕೆಂದೂ ಹೇಳಿಕೊಂಡರು. ಇದೇ ಸಮಯದಲ್ಲಿ ರಾಜಧಾನಿಯಿಂದ ರಾಜಮಾತೆಯ ಆಹ್ವಾನವನ್ನು ತಂದಿದ್ದ ಕರಭಕನು, ಪುತ್ರಪಿಂಡಪಾಲನವೆಂಬ ಉಪವಾಸವ್ರತಕ್ಕಾಗಿ ರಾಜಧಾನಿಗೆ ಬರಬೇಕೆಂದು ದುಷ್ಯಂತನಿಗೆ ತಿಳಿಸಿದನು. ಒಂದು ಕಡೆ ಧರ್ಮಕಾರ್ಯ, ಮತ್ತೊಂದು ಕಡೆ ಗುರುಜನರಾಜ್ಞೆ-ಹೀಗಿದ್ದುದರಿಂದ ವಿದೂಷಕನನ್ನೇ ತನ್ನ ಪ್ರತಿನಿಧಿಯಾಗಿ ಸಲಕ ಪರಿವಾರದೊಡನೆ ರಾಜಧಾನಿಗೆ ಕಳುಹಿಸಿ ತಾನು ಋಷಿಗಳ ಯಜ್ಞರಕ್ಷಣಕಾರ್ಯದಲ್ಲಿ ಪ್ರವೃತ್ತನಾದನು.

**ಮೂರನೆಯ ಅಂಕ**— ಇತ್ತಕಡೆ, ದುಷ್ಯಂತನಲ್ಲಿ ಗಾಢಾನುರಕ್ತೆಯಾಗಿದ್ದ ಶಕುಂತಲೆಯು ವಿರಹಜ್ವಾಲೆಗೆ ಒಳಗಾಗಿದ್ದಳು. ಆಕೆಯ ಕ್ಷೇಮಲಾಭಗಳನ್ನು ಸೋದರವಾತ್ಸಲ್ಯದಿಂದ ನೋಡಿಕೊಳ್ಳುತ್ತಿದ್ದ ಸಖಿಯರಿಬ್ಬರಿಗೂ ಇದಕ್ಕೆ ಕಾರಣವು ತಿಳಿದು ಆಕೆಯ ಶಿಶಿರೋಪಚಾರವನ್ನು ಮಾಡುತ್ತಾ ಶಕುಂತಲೆಯಿಂದ ದುಷ್ಯಂತನಿಗೆ ಪ್ರಣಯಪತ್ರಿಕೆಯೊಂದನ್ನು ಬರೆಯಿಸಿದರು. ಈಮಧ್ಯೆ ಋಷಿಕಾರ್ಯದಲ್ಲಿ ಸ್ವಲ್ಪ ಬಿಡುವು ದೊರೆಯಲು ದುಷ್ಯಂತನು ತನ್ನ ಪ್ರಿಯೆಯನ್ನು ನೋಡುವ ಕುತೂಹಲದಿಂದ ಆ ಆಶ್ರಮದಲ್ಲೇ ಸುತ್ತಾಡುತ್ತಾ ಆ ಮೂವರು ಸಖಿಯರೂ ಇದ್ದ ಲತಾಮಂಟಪದ ಬಳಿಗೆ ಬಂದು ಒಂದು ಮರದ ಮರೆಯಲ್ಲಿ ನಿಂತು ಅವರ ಸರಸಸಲ್ಲಾಪಗಳನ್ನು ಕೇಳಿ ಸಂತೋಷಪಡುತ್ತಿದ್ದನು. ಪ್ರಣಯಲೇಖನವನ್ನು ಬರೆದಾದ ಮೇಲೆ ಶಕುಂತಲೆಯು ಆ ಶ್ಲೋಕವನ್ನು ಓದಲಾಗಿ, ತಕ್ಕ ಸಮಯದಲ್ಲಿ ರಾಜನು ಆಕೆಗೆ ಕಾಣಿಸಿಕೊಂಡನು. ಸಖಿಯರಿಬ್ಬರೂ ತಾಯಿಯನ್ನಗಲಿದ ಹುಲ್ಲೆಯ ಮರಿಯನ್ನು ಅದರ ತಾಯಿಯ ಬಳಿಗೆ ಬಿಡುವ ವ್ಯಾಜದಿಂದ ಪ್ರಣಯಿಗಳಿಬ್ಬರನ್ನೂ ಬಿಟ್ಟು ಹೊರಟುಹೋದರು. ತನ್ನ ಸಖಿಯರನ್ನು ಹಿಂಬಾಲಿಸಬೇಕೆಂದು ಪ್ರಯತ್ನಿಸುತ್ತಿದ್ದ ಶಕುಂತಲೆಯನ್ನು ದುಷ್ಯಂತನು ತಡೆದು, ಹಿಂದೆ ಅನೇಕರು ರಾಜಕನ್ಯೆಯರು ತಮತಮಗೆ ಅನುರೂಪರಾದ ಪತಿಗಳನ್ನು ಗಾಂಧರ್ವ ವಿಧಿಯಿಂದ ವರಿಸಿದ್ದ ವೃತ್ತಾಂತವನ್ನು ವಿವರಿಸಿ ನಂಬಿಸಿ, ಆಕೆಯನ್ನೂ ಅದೇ ಗಾಂಧರ್ವವಿಧಿ

ಯಿಂದ ವಿವಾಹಮಾಡಿಕೊಂಡನು. ಯಜ್ಞವನ್ನು ಮುಗಿಸಿದ ಕೂಡಲೆ ತಾನು ರಾಜಧಾನಿಗೆ ಹೊರಡುವುದಾಗಿಯೂ ಶಕುಂತಲೆಯನ್ನು ತನ್ನಲ್ಲಿಗೆ ಕರೆತರುವುದಕ್ಕಾಗಿ ಪರಿವಾರವನ್ನು ಕಳುಹಿಸುವುದಾಗಿಯೂ ಹೇಳಿದನು. "ದುಷ್ಯಂತ" ಎಂದು ತನ್ನ ಹೆಸರನ್ನು ಕೆತ್ತಿದ್ದ ಮುದ್ರಿಕೆಯೊಂದನ್ನು ಆಕೆಗೆ ಕೊಟ್ಟು ತನ್ನ ಹೆಸರಿನ ಒಂದೊಂದು ಅಕ್ಷರವನ್ನು ದಿನಕ್ಕೆ ಒಂದೊಂದರಂತೆ ಉಚ್ಚರಿಸುತ್ತಾ ಆ ಹೆಸರಿನ ಕಡೆಯ ಅಕ್ಷರವನ್ನು ಉಚ್ಚರಿಸುವುದರೊಳಗಾಗಿ ಆಕೆಯು ತನ್ನ ಸಮೀಪದಲ್ಲಿರುವಳೆಂದು ಆಕೆಯನ್ನು ಬಹಳವಾಗಿ ನಂಬಿಸಿದನು. ಇಷ್ಟರಲ್ಲಿ ಶಕುಂತಲೆಯ ದೇಹಸ್ಥಿತಿಯನ್ನು ವಿಚಾರಿಸಿ ಆಕೆಗೆ ಶಾಂತ್ಯುದಕವನ್ನು ಕೊಡುವುದಕ್ಕಾಗಿ ಗೌತಮಿಯು ಬರುತ್ತಿದ್ದುದನ್ನು ಶಕುಂತಲೆಯ ಸಖಿಯರು ಗೂಢೋಕ್ತಿಯಿಂದ ತಿಳಿಸಲು, ಆಕೆಯು ದುಷ್ಯಂತನನ್ನು ಲತಾಮಂಟಪದಲ್ಲಿ ಮರೆಮಾಡಿದಳು. ಗೌತಮಿಯು ಬಂದು ಶಕುಂತಲೆಗೆ ಉದಕವನ್ನು ಕೊಟ್ಟು ಆಕೆಯನ್ನು ತನ್ನೊಡನೆ ಕರೆದುಕೊಂಡು ಹೋದಳು. ದುಷ್ಯಂತನು ತನ್ನ ಪ್ರಿಯೆಯ ವಿರಹದಿಂದ ವ್ಯಥೆಪಡುತ್ತಾ ತನ್ನ ಕರ್ತವ್ಯವನ್ನು ಜ್ಞಾಪಿಸಿಕೊಂಡು ಇಷ್ಟಿಸಂರಕ್ಷಣಾರ್ಥವಾಗಿ ಯಾಗಶಾಲೆಗೆ ಹೋಗಿ ಇಷ್ಟಿಯನ್ನು ಸಾಂಗವಾಗಿ ನೆರವೇರಿಸಿ ಋಷಿಗಳಿಂದ ಅನುಜ್ಞೆಯನ್ನು ಪಡೆದು ಶಕುಂತಲೆಯನ್ನು ನೆನೆದುಕೊಳ್ಳುತ್ತಾ ತನ್ನ ರಾಜಧಾನಿಗೆ ಹಿಂದಿರುಗಿದನು.

**ಮೂರನೆಯ ಮತ್ತು ನಾಲ್ಕನೆಯ ಅಂಕಗಳ ನಡುವಣ ವಿಷ್ಕಂಭಕ**—ಇತ್ತಲಾಗಿ ಶಕುಂತಲೆಯು ಪರ್ಣಶಾಲೆಯಲ್ಲಿ ಕುಳಿತು ವಿರಹವೇದನೆಯನ್ನು ಅನುಭವಿಸುತ್ತಾ ದುಷ್ಯಂತನಲ್ಲಿ ನಟ್ಟಮನಸ್ಸುಳ್ಳವಳಾಗಿದ್ದಳು. ಈ ಮಧ್ಯದಲ್ಲಿ ದೂರ್ವಾಸಮಹರ್ಷಿಗಳು ಮಾರ್ಗವಶದಿಂದ ಅಲ್ಲಿಗೆ ಬಂದರು. ಆದರೆ ಆ ಆಶ್ರಮದಲ್ಲಿ ತಮಗೆ ಯಥಾವಿಧಿಯಾಗಿ ಅತಿಥಿಸತ್ಕಾರವು ದೊರೆಯದಿದ್ದುದರಿಂದ ಅವರು ಕುಪಿತರಾಗಿ ಶಕುಂತಲೆಯನ್ನು ನಿರ್ದೇಶಿಸಿ, "ನೀನು ಯಾರನ್ನು ಕುರಿತು ಚಿಂತಿಸುತ್ತಾ ನನ್ನನ್ನು ಹೀಗೆ ಉಪೇಕ್ಷಿಸಿರುವೆಯೋ ಆತನು ನಿನ್ನನ್ನು ಮರೆತುಬಿಡಲಿ" ಎಂದು ಶಪಿಸಿ ಹೊರಟುಹೋಗುತ್ತಿದ್ದರು. ಸಖೀಹಿತಪರಾಯಣರಾದ ಅನಸೂಯಾಪ್ರಿಯಂವದೆಯರು ಆ ಋಷಿಯನ್ನು ಸಂತೈಸಲು ಬಹಳ

ಸನ್ನಾಹಮಾಡಿ ಕಡೆಗೆ ಅಭಿಜ್ಞಾನದರ್ಶನದ ಮೂಲಕ ಶಾಪನಿವೃತ್ತಿ ಯಾಗುವುದೆಂದು ಅವರಿಂದ ಅನುಗ್ರಹವನ್ನು ಸಂಪಾದಿಸಿಕೊಂಡರು. ಆದರೂ ಈ ದೂರ್ವಾಸಶಾಪದ ಘೋರ ವೃತ್ತಾಂತವನ್ನು ಕೋಮಲ ಹೃದಯಳಾದ ತಮ್ಮ ಸಖಿಗೆ ತಿಳಿಸಿದರೆ ನವಮಾಲಿಕಾ ಲತೆಯ ಮೇಲೆ ಬಿಸಿನೀರನ್ನು ಎರಚಿದಂತಾಗುವುದೆಂದು ಭಾವಿಸಿ ಮೌನವಾಗಿದ್ದರು.

**ನಾಲ್ಕನೆಯ ಅಂಕ**— ಇಷ್ಟರಲ್ಲಿ ಕಣ್ವಮಹರ್ಷಿಗಳು ತಮ್ಮ ಆಶ್ರಮಕ್ಕೆ ಹಿಂದಿರುಗಿ ಬಂದು ಶಕುಂತಲೆಯು ದುಷ್ಯಂತನನ್ನು ವರಿಸಿ, ಅಂತರ್ವತ್ನಿಯಾಗಿದ್ದ ವೃತ್ತಾಂತವನ್ನು ಅಶರೀರವಾಣಿಯ ಮೂಲಕವಾಗಿ ಅರಿತು, ಅಪ್ರಯತ್ನಿತವಾಗಿಯೇ ಶಕುಂತಲೆಗೆ ಅನುರೂಪವರಪ್ರಾಪ್ತಿ ಯಾದುದಕ್ಕೆ ಸಂತೋಷಿಸಿದರು. ವಿವಾಹಿತಳಾದ ಪುತ್ರಿಯು ಬಹುಕಾಲ ಪಿತೃಗೃಹದಲ್ಲಿಯೇ ಇರುವುದು ಯುಕ್ತವಲ್ಲವೆಂದು ಭಾವಿಸಿ ಆಕೆಯನ್ನು ತಮ್ಮ ಸಹೋದರಿಯಾದ ಗೌತಮಿಯೊಡನೆಯೂ ಶಾರ್ಙ್ಗರವ ಶಾರದ್ವತರೆಂಬ ಶಿಷ್ಯರೊಡನೆಯೂ ದುಷ್ಯಂತನ ಬಳಿಗೆ ಕಳುಹಿಸಿಕೊಡಬೇಕೆಂದು ನಿರ್ಧರಿಸಿದರು. ತಮ್ಮ ಸಖಿಯು ತಮ್ಮನ್ನು ಬಿಟ್ಟುಹೋಗುವಳೆಂದು ಪ್ರಿಯಂವದಾನಸೂಯೆಯರು ಸಖೀಸ್ನೇಹದಿಂದ ಬಹಳ ಕಳವಳ ಪಟ್ಟುಕೊಳ್ಳುತ್ತಾ ಆಕೆಗೆ ಅಲಂಕಾರಗಳನ್ನು ಮಾಡಿದರು. ಆ ಆಶ್ರಮದಲ್ಲಿದ್ದ ತಾಪಸಿಯರೂ ಬಂದು ಶಕುಂತಲೆಯನ್ನು ಆಶೀರ್ವದಿಸಿದರು.

ಬಳಿಕ ಕೆಲವರು ಋಷಿಕುಮಾರರು ಅನೇಕ ವಸ್ತ್ರಾಭರಣಗಳನ್ನು ತಂದುಕೊಟ್ಟು ಅವುಗಳನ್ನು ಕಣ್ವರ ತಪೋಮಾಹಾತ್ಮ್ಯದಿಂದ ತಾವು ಗಿಡಗಳಿಂದ ಪಡೆದರೆಂದು ತಿಳಿಸಿದರು. ಸಖಿಯರು ಅವುಗಳಿಂದಲೂ ಶಕುಂತಲೆಗೆ ಅಲಂಕರಿಸಿದರು. ಬಳಿಕ ಕಣ್ವರು ಆ ಪ್ರದೇಶಕ್ಕೆ ಬಂದು ತಮ್ಮ ಪ್ರೀತಿಯುಕ್ತವಾದ ದೃಷ್ಟಿಯಿಂದಲೇ ಆಲಿಂಗಿಸುವಂತೆ ತಮ್ಮ ಪಾಲಿತಪುತ್ರಿಯನ್ನು ನೋಡುತ್ತಾ, ಆಕೆಯು ಆಶ್ರಮವನ್ನು ಬಿಟ್ಟು ಹೊರಡುವುದರಿಂದ ವಾನಪ್ರಸ್ಥರಾದ ತಮಗೇ ಅಷ್ಟೊಂದು ಚಿತ್ತಾವೇಗವಾಗುತ್ತಿರುವಾಗ ಗೃಹಸ್ಥಾಶ್ರಮಿಗಳು ತಮ್ಮ ಹೆಣ್ಣುಮಕ್ಕಳುಗಳನ್ನು ಪತಿಗೃಹಕ್ಕೆ ಕಳುಹಿಸಿಕೊಡುವಾಗ ಮತ್ತೆಷ್ಟು ವ್ಯಥೆಪಟ್ಟುಕೊಳ್ಳುವರೋ ಎಂದುಕೊಳ್ಳುತ್ತಾ, ಶಕುಂತಲೆಯನ್ನು ಆಶೀರ್ವದಿಸಿದುದಲ್ಲದೆ, ಸನ್ನಿಹಿತ

ದೇವತೆಗಳುಳ್ಳ ತಪೋವನತರುಗಳಿಂದಲೂ ಅವುಗಳ ವಿಷಯದಲ್ಲಿ ಆತ್ಮೀಯ ಭಾವವನ್ನು ಪಡೆದಿದ್ದ ಶಕುಂತಲೆಗೆ ಅನುಜ್ಞೆಯುಂಟಾಗುವಂತೆ ತಮ್ಮ ಮಹಾತ್ಮ್ಯದಿಂದ ಏರ್ಪಡಿಸಿದರು. ಆ ವನದಲ್ಲಿದ್ದ ಮೃಗಪಕ್ಷಿಗಳು ಸಹ ಶಕುಂತಲೆಯು ತಮ್ಮನ್ನು ಬಿಟ್ಟು ಅಗಲುವುದಕ್ಕಾಗಿ ಶೋಕಿಸುತ್ತಿದ್ದಂತೆ ತೋರುತ್ತಿದ್ದುವು. ಶಕುಂತಲೆಯು ತನಗೆ ಅತ್ಯಂತ ಪ್ರಿಯವಾಗಿದ್ದ ವನಜ್ಯೋತ್ಸ್ನೆ ಎಂಬ ಲತೆಯಿಂದಲೂ ಮೃಗಶಾಬದಿಂದಲೂ ಅನುಜ್ಞೆಯನ್ನು ಪಡೆದು, ಗರ್ಭಿಣಿಯಾಗಿದ್ದ ಹರಿಣಿಯು ಪ್ರಸವಿಸಿದ ವೃತ್ತಾಂತವನ್ನು ತನಗೆ ತಿಳಿಸಬೇಕೆಂದು ಕಣ್ವರನ್ನು ಪ್ರಾರ್ಥಿಸಿ, ಮೃಗಶಾಬವನ್ನು ಅವರ ಪೋಷಣೆಗೆ ಒಪ್ಪಿಸಿ, ಸಬಾಷ್ಪನಯನಳಾಗಿ ಮುಂದೆ ಮುಂದೆ ಹೊರಟಳು. ಜಲಾಶಯದ ವರೆಗೂ ಕಣ್ವರೂ ಬಂದು ಅಲ್ಲಿ ನಿಂತು ಶಾರ್ಙ್ಗರವನನ್ನು ಕುರಿತು ದುಷ್ಯಂತನಿಗೆ ಹೇಳಬೇಕಾಗಿದ್ದ ಹಿತವಾದಗಳನ್ನು ತಿಳಿಸಿ ಶಕುಂತಲೆಗೂ ಬುದ್ಧಿವಾದವನ್ನು ಹೇಳಿ ಆಕೆಯನ್ನು ಆಶೀರ್ವದಿಸಿದರು. ಶಕುಂತಲೆಯು ತಪೋವನವನ್ನು ಬಿಟ್ಟು ಹೋಗಲಾರದೆ ಕಳವಳಿಸುತ್ತಾ ತಪೋವನವನ್ನು ಮತ್ತೆ ಯಾವಾಗ ನೋಡಬಹುದೋ ಎಂದು ಚಿಂತಿಸುತ್ತಿರಲು, ಕಣ್ವರು ಪತಿಸಾನ್ನಿಧ್ಯದಿಂದ ತೌರುಮನೆಯ ಮೇಲಣ ಗೀಳು ತಗ್ಗುವುದೆಂದೂ, ಪ್ರಬುದ್ಧನಾದ ಪುತ್ರನಿಗೆ ರಾಜ್ಯವನ್ನು ಒಪ್ಪಿಸಿದ ಪತಿಯೊಡನೆ ಆಶ್ರಮಕ್ಕೆ ಹಿಂತಿರುಗಿ ಬಂದು ತಮ್ಮ ವಾರ್ಧಕ್ಯವನ್ನು ಮುನಿವೃತ್ತಿಯಿಂದ ಕಳೆಯಬಹುದೆಂದೂ ಸಮಾಧಾನಮಾಡಿ, ಹೆಚ್ಚುಹೊತ್ತು ನಿಂತರೆ ತಪೋನುಷ್ಠಾನಕಾಲವು ಮೀರುವುದೆಂದು ತಿಳಿದು ಪರ್ಣಶಾಲೆಗೆ ಹಿಂದಿರುಗಿದರು. ತಮ್ಮ ಪಾಲಿತಪುತ್ರಿಯು ನೀವಾರಬಲಿಯು ಮೊಳೆತಿದ್ದ ಪರ್ಣಶಾಲೆಯ ದ್ವಾರಬಂಧಪ್ರದೇಶವನ್ನು ನೋಡಿದಾಗ ಉಂಟಾಗುವ ಚಿಂತೆಯನ್ನು ಹೇಗೆ ತಡೆದುಕೊಳ್ಳುವುದೋ ಎಂದು ಕಣ್ವರು ಸ್ವಲ್ಪ ಆತಂಕಯುಕ್ತರಾಗಿದ್ದರೂ, ಮತ್ತೊಬ್ಬನು ತಮ್ಮ ಬಳಿಯಲ್ಲಿಟ್ಟಿದ್ದ ದ್ರವ್ಯವನ್ನು ಆತನಿಗೇ ಕೊಟ್ಟುದರಿಂದ ಉಂಟಾಗುವ ಸಂತೋಷವನ್ನು ಹೊಂದಿ ಸಮಾಧಾನಪಟ್ಟುಕೊಂಡರು.

**ಐದನೆಯ ಅಂಕ—**ಇತ್ತ ದುಷ್ಯಂತನು ಒಂದಾನೊಂದು ದಿನ

ಆಸ್ಥಾನದಲ್ಲಿದ್ದಾಗ ಹಂಸಪದಿಕೆಯೆಂಬ ಅಂತಃಪುರಸ್ತ್ರೀಯು ಗಾನ ಮಾಡುತ್ತಿದ್ದ ಒಂದು ಗೀತವನ್ನು ಕೇಳಿ ಅದರ ಅರ್ಥದಿಂದ ಮನಸ್ಸು ಕರಗಿದವನಾಗಿ, ತನಗೆ ಪರಿಚಿತವಾದ ಯಾವುದೋ ಒಂದು ಪದಾರ್ಥ ವನ್ನು ಕಳೆದುಕೊಂಡಿರುವವನಂತೆ ವ್ಯಥೆಪಟ್ಟನು. ಇಷ್ಟರಲ್ಲಿ ಕಂಚುಕಿ ಯೊಬ್ಬನು ಬಂದು ಕಣ್ವಶಿಷ್ಯರು ತಮ್ಮ ಗುರುಗಳಿಂದ ಯಾವುದೋ ಸಂದೇಶವನ್ನು ತಂದಿಟ್ಟುದನ್ನೂ ಅವರೊಡನೆ ಸ್ತ್ರೀಯುನೂ ಇದ್ದುದನ್ನೂ ಮಹಾರಾಜನಿಗೆ ವಿಜ್ಞಾಪಿಸಿದನು. ಆಗತಾನೆ ಧರ್ಮಾಸನವನ್ನು ಬಿಟ್ಟು ಎದ್ದಿದ್ದ ದುಷ್ಯಂತನು ತನ್ನ ಪುರೋಹಿತನಾದ ಸೋಮರಾತನಿಂದ ಆ ಅಭ್ಯಾಗತರಿಗೆ ಉಚಿತಸತ್ಕಾರಗಳನ್ನು ಮಾಡಿಸಿ ಅವರನ್ನು ಹೋಮ ಶಾಲೆಯಲ್ಲಿ ಇದಿರುಗೊಂಡನು. ಪರಸ್ಪರಕುಶಲಪ್ರಶ್ನೆಗಳಾದ ಬಳಿಕ ಋಷಿಶಿಷ್ಯರು ತಮ್ಮೊಡನೆ ಶಕುಂತಲೆಯನ್ನು ಕಳುಹಿಸಿ ಆಕೆಯನ್ನು ದುಷ್ಯಂತನ ಬಳಿಯಲ್ಲಿ ಬಿಟ್ಟುಬರಬೇಕೆಂದು ಗುರುಗಳಾದ ಕಣ್ವರು ಆಜ್ಞಾಪಿಸಿದ್ದ ವಿಷಯವನ್ನು ತಿಳಿಸಿದರು. ಮಹಾರಾಜನು ಅವರೊಡನೆ ಇದ್ದ ಆ ತರುಣಿಯನ್ನು ನೋಡಿದಕೂಡಲೆ ಯಾರಾಗಿರಬಹುದೆಂದು ಕುತೂಹಲಾವಿಷ್ಟನಾದರೂ ಪರಯುವತಿಯನ್ನು ಕುರಿತು ವಿಚಾರಮಾಡು ವುದು ಅಯುಕ್ತವೆಂದು ತತ್ಕ್ಷಣವೇ ಮನಸ್ಸನ್ನು ನಿರೋಧ ಮಾಡಿ ಕೊಂಡನು. ಋಷಿಶಿಷ್ಯರ ಮಾತುಗಳನ್ನು ಕೇಳಿದಕೂಡಲೆ ಆತನಿಗೆ ಬಹಳ ವಿಷಾದವಾಗಿ ತಾನು ಶಕುಂತಲೆಯನ್ನು ವರಿಸಿದ್ದ ವೃತ್ತಾಂತ ವನ್ನೇ ತಿಳಿಯೆನೆಂದು ಹೇಳಿಬಿಟ್ಟನು. ಶಕುಂತಲೆಯಾದರೋ ಆಶ್ರಮಕ್ಕೆ ದುಷ್ಯಂತನು ಬಂದಿದ್ದಾಗ ಸಂಭವಿಸಿದ್ದ ಕೆಲವು ಸಂಗತಿಗಳನ್ನು ಜ್ಞಾಪಿ ಸಿದಳು; ಆದರೂ ಪ್ರಯೋಜನವಾಗಲಿಲ್ಲ. ದುಷ್ಯಂತನು ಅಗಲುವಾಗ ತನಗೆ ಕೊಟ್ಟಿದ್ದ ಉಂಗುರವನ್ನಾದರೂ ತೋರಿಸುವೆನೆಂದು ಹೇಳಿ ಅದನ್ನು ತೋರಿಸಲು ತನ್ನ ಬೆರಳನ್ನು ನೋಡಿಕೊಂಡಾಗ ಉಂಗುರವೂ ಅಲ್ಲಿರಲಿಲ್ಲ. ಇದರಿಂದ ಶಕುಂತಲೆಯು ಸುಳ್ಳುಹೇಳುತ್ತಿರುವಳೆಂದು ದುಷ್ಯಂತನಿಗೆ ಮತ್ತೂ ಸಂಶಯವು ಹೆಚ್ಚಾಯಿತು. ಋಷಿಶಿಷ್ಯರೂ ಶಕುಂತಲೆಯೂ ಎಷ್ಟು ಹೇಳಿದರೂ ನಿಷ್ಪ್ರಯೋಜನವಾಯಿತು. ಆಗ ಋಷಿಶಿಷ್ಯರು ದುಷ್ಯಂತನನ್ನು ಕುರಿತು—"ನಮ್ಮ ಗುರುಗಳ ಸಂದೇಶದಂತೆ

ನಡೆದಿರುವೆವು ಪತಿಗೆ ಪತ್ನಿಯು ವಿಷಯದಲ್ಲಿ ಸರ್ವಾಧಿಕಾರವಿರುವುದ ರಿಂದ ಈಕೆಯನ್ನು ಇಷ್ಟವಿದ್ದರೆ ಪರಿಗ್ರಹಿಸಬಹುದು, ಇಲ್ಲವಾದರೆ ಬಿಟ್ಟುಬಿಡಬಹುದು" ಎಂದು ಹೇಳಿ ಹೊರಡಲು ಅನುವಾದರು. ಆಗ ಸೋಮರಾತನು ದುಷ್ಯಂತನನ್ನು ಕುರಿತು "ಋಷಿಗಳು ಹಿಂದೆಯೇ ನಿಮಗೆ ಹೇಳಿರುವಂತೆ ಚಕ್ರವರ್ತಿಲಕ್ಷಣಗಳುಳ್ಳ ಪುತ್ರನನ್ನು ಈಕೆಯು ಪ್ರಸವಿಸಿದರೆ ಈಕೆಯನ್ನು ಅಂಗೀಕರಿಸಬಹುದು. ಪ್ರಸವವಾಗುವ ವರೆಗೂ ಈಕೆಯು ನನ್ನ ಮನೆಯಲ್ಲಿದ್ದುಕೊಂಡು ಸಂರಕ್ಷಿತಳಾಗ ಬಹುದು"–ಎಂದು ತಿಳಿಸಿದನು

ಆ ಮಾತಿಗೆ ದುಷ್ಯಂತನು ಒಪ್ಪಿದನು. ಶಕುಂತಲೆಯಾದರೋ ತನಗೆ ಉಂಟಾಗಿದ್ದ ದುರವಸ್ಥೆಗಾಗಿ ಶೋಕಿಸುತ್ತಾ ತಾನು ಅಪ್ಸರ ಸ್ತ್ರೀಯಾದ ಮೇನಕೆಗೂ ಋಷಿಶ್ರೇಷ್ಠರಾದ ವಿಶ್ವಾಮಿತ್ರರಿಗೂ ಪುತ್ರಿ ಯಾಗಿದ್ದರೂ, ಕಣ್ವಮಹರ್ಷಿಗಳಿಂದ ಪಾಲಿತಳಾಗಿದ್ದರೂ, ಚಕ್ರವರ್ತಿ ಯಾದ ದುಷ್ಯಂತನನ್ನು ಕೈಹಿಡಿದಿದ್ದರೂ, ತನಗೆ ಇಂತಹ ವಿಪತ್ತು ಸಂಭವಿಸಿತಲ್ಲಾ ಎಂದು ಗೋಳಿಡುತ್ತಾ ಪುರೋಹಿತನ ಹಿಂದೆಯೇ ಹೋಗುತ್ತಿದ್ದಳು. ಇವರ ದಾರಿಯಲ್ಲಿದ್ದ ಅಪ್ಸರಸ್ತೀರ್ಥದ ಬಳಿಗೆ ಆ ಸಮಯಕ್ಕೆ ಸರಿಯಾಗಿ ಬಂದಿದ್ದ ಮೇನಕೆಯು ಶಕುಂತಲೆಯನ್ನು ಅದೃಶ್ಯಳನ್ನಾಗಿ ಮಾಡಿ ಕರೆದುಕೊಂಡು ಹೊರಟುಹೋದಳು. ಬಳಿಕ ಋಷಿಶಿಷ್ಯರೂ ತಮ್ಮ ಆಶ್ರಮದ ದಾರಿಯನ್ನು ಹಿಡಿದು ಹೊರಟು ಹೋದರು. ಸೋಮರಾತನು ಆಸ್ಥಾನಕ್ಕೆ ಹಿಂದಿರುಗಿ, ಶಕುಂತಲೆಯು ಅದೃಶ್ಯಳಾದ ವೃತ್ತಾಂತವನ್ನು ಮಹಾರಾಜನಿಗೆ ತಿಳಿಸಲು, ಆತನು ಸೋಮರಾತನನ್ನು ಮನೆಗೆ ಕಳುಹಿಸಿ ತನ್ನ ಬಂಧುಗಳಲ್ಲಿ ಯಾರನ್ನೋ ಅಗಲಿದ್ದಂತೆ ಕಳವಳಪಟ್ಟುಕೊಳ್ಳುತ್ತಾ ಶಯ್ಯಾಗೃಹಕ್ಕೆ ಹೊರಟು ಹೋದನು.

**ಐದನೆಯ ಮತ್ತು ಆರನೆಯ ಅಂಕಗಳ ನಡುವಣ ಪ್ರವೇ ಶಕ**—ಶಕುಂತಲೆಯು ಕಳೆದುಕೊಂಡಿದ್ದ ಉಂಗುರವು, ಆಕೆಯು ಪತಿ ಗೃಹಕ್ಕೆ ಬರುತ್ತಾ ದಾರಿಯಲ್ಲಿ ಸಿಕ್ಕಿದ ಶಕ್ರತೀರ್ಥದಲ್ಲಿ ಸ್ನಾನಮಾಡು ತ್ತಿದ್ದಾಗ ಜಾರಿ ನೀರಿನಲ್ಲಿ ಬಿದ್ದುಹೋಗಲು ಅದನ್ನು ಒಂದು ಮೀನು

ನುಂಗಿಬಿಟ್ಟಿದ್ದಿತ್ತು. ಈ ಮೀನನ್ನು ಒಬ್ಬ ಬೆಸ್ತನು ಹಿಡಿದುಕೊಂಡು ಬಂದು ಅದನ್ನು ಸೀಳುತ್ತಿದ್ದಾಗ ಉಂಗುರವು ಅವನಿಗೆ ದೊರೆಯಲಾಗಿ ಅದನ್ನು ಮಾರಿಕೊಂಡು ಬರಲು ರಾಜಧಾನಿಗೆ ತಂದು ಒಬ್ಬ ವರ್ತಕನಿಗೆ ತೋರಿಸುತ್ತಿದ್ದನು. ಇದು ರಾಜಭಟರಿಗೆ ತಿಳಿದು ದುಷ್ಯಂತನಾಮಾಂಕಿತ ವಾದ ಆ ಅನರ್ಘಾಂಗುಲೀಯಕವು ಬೆಸ್ತನ ವಶಕ್ಕೆ ಬಂದುದು ಹೇಗೆಂದು ಅವರು ಸಂಶಯಿಸಿ ಅವನನ್ನು ಮಹಾರಾಜನ ಬಳಿಗೆ ಕರೆದುಕೊಂಡು ಹೋದರು. ಆ ಬೆಸ್ತನು ಉಂಗುರವು ತನಗೆ ದೊರೆತ ರೀತಿಯನ್ನು ವಿವರಿಸಲು, ದುಷ್ಯಂತನು ನಂಬಿ ಬೆಸ್ತನಿಗೆ ಉಂಗುರದ ಬೆಲೆಯನ್ನು ಕೊಡಿಸಿ ಕಳುಹಿಸಿಬಿಟ್ಟನು.

**ಆರನೆಯ ಅಂಕ**— ಆ ಅಂಗುಳೀಯಕದರ್ಶನಮಾತ್ರದಿಂದಲೇ ದುಷ್ಯಂತನನ್ನು ಆವರಿಸಿಕೊಂಡಿದ್ದ ವಿಸ್ಮೃತಿಯು ತೊಲಗಿಹೋಗಿ ಶಕುಂತಲಾವಿವಾಹ ವೃತ್ತಾಂತವೆಲ್ಲಾ ಜ್ಞಾಪಕಕ್ಕೆ ಬಂದಿತು. ಆ ಬಳಿಕ ಶಕುಂತಲೆಯ ವಿಷಯದಲ್ಲಿ ತಾನು ತೋರಿಸಿದ್ದ ನಿರ್ಘೃಣತೆಗಾಗಿ ದುಷ್ಯಂತನು ಪಶ್ಚಾತ್ತಾಪಪಟ್ಟುಕೊಳ್ಳುತ್ತಾ ನಿದ್ರಾಹಾರವಿಹಾರಗಳನ್ನೆಲ್ಲಾ ತ್ಯಜಿಸಿ ಶಕುಂತಲೆಗಾಗಿ ಮನಸ್ಸಿನಲ್ಲಿಯೇ ಕೊರಗುತ್ತಿದ್ದನು.

ಈ ಮಧ್ಯದಲ್ಲಿ, ರಾಜಧಾನಿಯ ಬಳಿಯಲ್ಲಿದ್ದ ಉದ್ಯಾನಕ್ಕೆ ಬಂದಿದ್ದ ಸಾನುಮತಿಯೆಂಬ ಅಪ್ಸರಸ್ತ್ರೀಯು, ಆ ವಸಂತಕಾಲದಲ್ಲಿಯೂ ಆ ಉದ್ಯಾನವು ಶೋಭಾಹೀನವಾಗಿರಲು ಕಾರಣವೇನೆಂದು ಆಶ್ಚರ್ಯಪಟ್ಟುಕೊಳ್ಳುತ್ತಿದ್ದಾಗ, ಅಲ್ಲಿಗೆ ಬಂದಿದ್ದ ಕಂಚುಕಿಯ ಮೂಲಕ ಅದರ ಶೋಭಾಹೀನತೆಗೆ ದುಷ್ಯಂತನ ಮನೋವ್ಯಥೆಯೇ ಕಾರಣವೆಂದು ತಿಳಿಯಬಂದು, ತನ್ನ ಸಖೀಪುತ್ರಿಯ ವಿಷಯದಲ್ಲಿ ದುಷ್ಯಂತನಿಗೆ ಅಷ್ಟು ಪಶ್ಚಾತ್ತಾಪ ಉಂಟಾಗಿದ್ದುದಕ್ಕಾಗಿ ಸಂತೋಷಪಟ್ಟುಕೊಳ್ಳುತ್ತಿದ್ದಳು. ದುಷ್ಯಂತನು ತನ್ನ ವಿರಹದುಃಖವನ್ನು ಸ್ವಲ್ಪಮಟ್ಟಿಗೆ ಪರಿಹಾರ ಮಾಡಿಕೊಳ್ಳುವುದಕ್ಕಾಗಿ ಆ ಉದ್ಯಾನಕ್ಕೆ ಬಂದು ಶಕುಂತಲೆಯ ಚಿತ್ರಪಟವನ್ನು ನೋಡುತ್ತಾ ಮನಸ್ಸನ್ನು ಸಮಾಧಾನಮಾಡಿಕೊಳ್ಳುತ್ತಿದ್ದುದನ್ನು ಪ್ರತ್ಯಕ್ಷವಾಗಿ ಕಂಡು ಸಾನುಮತಿಯು ಮತ್ತೂ ಸಂತೋಷಪಟ್ಟುಕೊಂಡಳು.

ದುಷ್ಯಂತನು ತನ್ನ ಅಧಿಕಚಿಂತೆಯಲ್ಲಿಯೂ ತನ್ನ ಕರ್ತವ್ಯವಾದ ಧರ್ಮಾಧಿಕಾರದಲ್ಲಿ ವಿಮುಖನಾಗಿರಲಿಲ್ಲ. ಒಂದಾನೊಂದು ದಿನ ಆ ರಾಜಧಾನಿಯಲ್ಲಿದ್ದ ಧನಮಿತ್ರನೆಂಬೊಬ್ಬ ವಣಿಗ್ವರನು ಅಪುತ್ರಕನಾಗಿ ಸಾಯಲು, ಮಂತ್ರಿಯು ಆತನ ಹಣವನ್ನೆಲ್ಲಾ ರಾಜಕೋಶಕ್ಕೆ ಸೇರಿಸ ಬೇಕೆಂದು ಸೂಚಿಸಿದ್ದನು. ದುಷ್ಯಂತನಾದರೋ ಆ ವಣಿಗ್ವರನ ಪತ್ನಿ ಯೊಬ್ಬಳು ಗರ್ಭಿಣಿಯಾಗಿದ್ದ ವೃತ್ತಾಂತವನ್ನು ತಿಳಿದು ಆ ಗರ್ಭಸ್ಥ ವಾದ ಶಿಶುವಿಗೆ ಆಸ್ತಿಯೆಲ್ಲವೂ ಸೇರಬೇಕೆಂದು ಇತ್ಯರ್ಥವಾಡಿದನು. ಇಷ್ಟರಲ್ಲಿ ಮೇಘಚ್ಛಂದವೆಂಬ ಉಪ್ಪರಿಗೆಗೆ ರಾಣಿಯು ಭಯದಿಂದ ಚಿತ್ರಪಟವನ್ನು ಎತ್ತಿಕೊಂಡು ಓಡಿಹೋಗಿದ್ದ ವಿದೂಷಕ ಮಾಧವ್ಯನ ರೋದನ ಧ್ವನಿ ಕೇಳಬಂದುದರಿಂದ, ಅವನನ್ನು ಬಿಡಿಸಿಕೊಳ್ಳುವುದಕ್ಕಾಗಿ ಧನುರ್ಧಾರಿಯಾಗಿ ದುಷ್ಯಂತನು ಅತ್ತಕಡೆಗೆ ಹೋದನು. ಅಲ್ಲಿ ವಿದೂಷ ಕನ ಬಳಿಯಲ್ಲಿದ್ದ ಇಂದ್ರ ಸಾರಥಿಯಾದ ಮಾತಲಿಯನ್ನು ಕಂಡು ಪರಸ್ಪರ ಕುಶಲಪ್ರಶ್ನೆಗಳಾದ ಬಳಿಕ ಕಾಲನೇಮಿಪುತ್ರರಿಂದ ಇಂದ್ರನಿಗೆ ಒದಗಿದ್ದ ಬಾಧೆಯ ವೃತ್ತಾಂತವನ್ನೂ ಇಂದ್ರನು ದುಷ್ಯಂತನ ಸಹಾಯ ವನ್ನು ಕೋರಿರುವುದನ್ನೂ ಕೇಳಿ ರಾಜ್ಯಭಾರಕ್ಕೆ ತಕ್ಕ ಏರ್ಪಾಡುಗಳನ್ನು ಮಾಡಿ ಇಂದ್ರಸಹಾಯಾರ್ಥವಾಗಿ ಪ್ರಯಾಣೋನ್ಮುಖನಾದನು.

**ಏಳನೆಯ ಅಂಕ**— ಇಂದ್ರಲೋಕಕ್ಕೆ ತಲುಪಿದ ಸ್ವಲ್ಪ ಕಾಲ ದಲ್ಲೇ ಕಾಲನೇಮಿಪುತ್ರರ ಹಾವಳಿಯನ್ನು ಕಡೆಗಾಣಿಸಿ ಇಂದ್ರನಿಂದ ಬಹಳವಾಗಿ ಮಾನಮರ್ಯಾದೆಗಳನ್ನು ಪಡೆದು, ಮೇಘಮಾರ್ಗವನ್ನು ಸೇರಿ ಅಲ್ಲಿ ಕಿಂಪುರುಷವರ್ಷದ ಹೇಮಕೂಟವೆಂಬ ಪರ್ವತದಲ್ಲಿ ತಪ ಸ್ಸನ್ನು ಮಾಡುತ್ತಿದ್ದ ಮಾರೀಚಾಶ್ರಮಕ್ಕೆ ಬಂದು, ಆ ಋಷಿವರ್ಯನ ಸಂದರ್ಶನಾರ್ಥವಾಗಿ ಒಂದು ಅಶೋಕವೃಕ್ಷದ ನೆರಳಲ್ಲಿ ಕಾದುಕೊಂಡಿ ದ್ದನು. ಆಗ ಒಬ್ಬ ಬಾಲಕನನ್ನು ತಡೆಯುತ್ತಿದ್ದ ಕೆಲವರು ತಾಪಸಿಯರ ಧ್ವನಿಯು ಕೇಳಬಂದಿತು. ಸ್ವಲ್ಪ ಹೊತ್ತಿನಲ್ಲೇ ಆ ಬಾಲಕನೂ ಕಣ್ಣಿಗೆ ಗೋಚರನಾದನು. ಆ ಹುಡುಗನನ್ನು ನೋಡಿದಕೂಡಲೆ ದುಷ್ಯಂತನಲ್ಲಿ ಒಂದು ಬಗೆಯ ಅವ್ಯಾಜವಾದ ಮಮತೆಯುಂಟಾಯಿತು. ಆ ಬಾಲಕನು ಹಿಡಿದುಕೊಂಡು ಬಾಧಿಸುತ್ತಿದ್ದ ಸಿಂಹದ ಮರಿಯನ್ನು ತಾಪಸಿಯರು

ಬಿಡಿಸಲಾರದೆ ಸಮೀಪದಲ್ಲಿದ್ದ ರಾಜನನ್ನು ಕರೆದು ಅದನ್ನು ಬಿಡಿಸೆಂದು ಕೇಳಿಕೊಳ್ಳಲು, ರಾಜನು ಹಾಗೆಯೇ ಮಾಡಿ ಈ ಬಾಲಕನು ಯಾರ ಮಗನೆಂದು ಕೇಳಿದನು. ಧರ್ಮಪತ್ನಿಯನ್ನು ತ್ಯಜಿಸಿದವನ ಹೆಸರನ್ನು ಎತ್ತಲು ಆ ತಾಪಸಿಯರು ಒಪ್ಪಲಿಲ್ಲ. ಈ ಸಮಯದಲ್ಲಿ ಮತ್ತೊಬ್ಬ ತಾಪಸಿಯು ಒಂದು ನವಿಲಿನ ಬೊಂಬೆಯನ್ನು ಹಿಡಿದುಕೊಂಡು ಬಂದು "ಈ ಶಕುಂತಲಾವಣ್ಯವನ್ನು ನೋಡು" ಎಂದು ಆ ಹುಡುಗನಿಗೆ ತೋರಿ ಸಲು, "ಎಲ್ಲಿ ನಮ್ಮ ಅಮ್ಮ!" ಎಂದು ಆ ಬಾಲಕನು ಕೇಳಿದನು. ಕೂಡಲೇ ದುಷ್ಯಂತನಿಗೆ ಆ ಮಗುವು ತನ್ನ ಧರ್ಮಪತ್ನಿಯಾದ ಶಕುಂತ ಲೆಯ ಪುತ್ರನೆಂಬ ಭಾವನೆಯು ತಲೆದೋರಿತು. ಇಷ್ಟರಲ್ಲಿ ಆ ಬಾಲಕ ನಿಗೆ ಕಟ್ಟಿದ್ದ ರಕ್ಷಾಯಂತ್ರವು ಬಿದ್ದುಹೋಯಿತು. ಅದನ್ನು, ಕಟ್ಟಿದವ ರಾಗಲಿ ಅಥವಾ ಆ ಮಗುವಿನ ತಾಯಿತಂದೆಗಳಾಗಲಿ ಮುಟ್ಟಬಹುದಾ ಗಿದ್ದಿತೇ ಹೊರತು, ಅನ್ಯರು ಮುಟ್ಟುವುದು ಅಪಾಯಕರವಾಗಿದ್ದಿತ್ತು. ಏಕೆಂದರೆ, ಆ ರಕ್ಷಾಯಂತ್ರವನ್ನು ಇತರರು ಮುಟ್ಟಿದ ಮಾತ್ರಕ್ಕೇ ಅದು ಸರ್ಪವಾಗಿ ಅವರನ್ನು ಕಚ್ಚಿ ಕೊಂದುಬಿಡುತ್ತಿದ್ದಿತ್ತು. ಹೀಗಿರುವಲ್ಲಿ ದುಷ್ಯಂತನು ರಕ್ಷಾಯಂತ್ರವನ್ನು ಮುಟ್ಟಿದರೂ ಆತನಿಗೆ ತಿಲಾಂಶವಾ ದರೂ ಬಾಧೆಯಾಗಲಿಲ್ಲ. ಇಷ್ಟರಲ್ಲಿ ಅಲ್ಲಿಗೆ ತಾಪಸಿಯಂತೆ ಕೃಶಳಾಗಿದ್ದ ಶಕುಂತಲೆಯೂ ಬರಲು, ಚಿರಕಾಲ ವಿರಹಾಗ್ನಿಗೆ ಸಿಕ್ಕಿ ಬೇಯುತ್ತಿದ್ದ ದಂಪತಿಗಳು ಪರಸ್ಪರ ವೃತ್ತಾಂತವನ್ನು ತಿಳಿಸುತ್ತಾ, ಸುಖಾಂಭೋಧಿ ಮಗ್ನರಾದರು. ಆ ಬಳಿಕ ದಂಪತಿಗಳು ತಮ್ಮ ಪುತ್ರನನ್ನೂ ಜೊತೆಯ ಲ್ಲಿಟ್ಟುಕೊಂಡು ದಾಕ್ಷಾಯಣೀಮಾರೀಚರಿಗೆ ವಂದಿಸಿ ಅವರಿಂದ ಅನು ಗೃಹೀತರಾಗಿ ತಮ್ಮ ರಾಜಧಾನಿಗೆ ಹಿಂದಿರುಗಿಬಂದು ಸುಖವಾಗಿದ್ದರು.

## ೬. ಮಹಾಭಾರತದ ಕಥೆಗೂ ಶಾಕುಂತಲ ನಾಟಕದ ಕಥೆಗೂ ಇರುವ ವ್ಯತ್ಯಾಸಗಳೂ ಅವುಗಳ ಕಾರಣಗಳೂ ಔಚಿತ್ಯಗಳೂ

ಚೆನ್ನಾಗಿ ಸ್ಪಷ್ಟಪಡಲೆಂಬ ಉದ್ದೇಶದಿಂದ ಈ ಎರಡು ಕಥೆಗಳಿಗೂ ಇರುವ ವ್ಯತ್ಯಾಸಗಳನ್ನು ಒಂದು ಪಟ್ಟಿಯ ಮೂಲಕ ಈ ಕೆಳಗೆ ತೋರಿಸಲಾಗಿದೆ.

| ಮಹಾಭಾರತದ ಕಥೆ | ನಾಟಕದ ಕಥೆ |
| --- | --- |
| ೧. ದುಷ್ಯಂತನು ಪರ್ಣಶಾಲೆಯಲ್ಲಿದ್ದ ಏಕಾಂಗಿಯಾದ ಶಕುಂತಲೆಯನ್ನು ಕಂಡು ಕೂಡಲೇ ಮೋಹಿಸುವನು. ಶಕುಂತಲೆಗೆ ದುಷ್ಯಂತನನ್ನು ಕಂಡಕೂಡಲೆ ಅವನ ಪರಿಚಯವಾಗುವುದು. | ೧. ಶಕುಂತಲೆಯು ತನ್ನ ಸಖಿಯರೊಡನೆ ವೃಕ್ಷಗಳಿಗೆ ಜಲಸೇಚನವನ್ನು ಮಾಡುತ್ತಿದ್ದಾಗ ದುಷ್ಯಂತನು ಆಕೆಯನ್ನು ಕಂಡು ಆಕೆಗೆ ಮಧುಪಬಾಧೆಯುಂಟಾಗಿದ್ದಾಗ ಕಾಣಿಸಿಕೊಳ್ಳುವನು. ಶಕುಂತಲೆಗೆ ದುಷ್ಯಂತನ ಪರಿಚಯುವು ಕ್ರಮಕ್ರಮವಾಗಿ ಆಗುವುದು. |
| ೨. ಶಕುಂತಲೆಯೇ ತನ್ನ ಜನನ ವೃತ್ತಾಂತವನ್ನು ನಿಸ್ಸಂಕೋಚದಿಂದಲೂ ವಿಸ್ತಾರವಾಗಿಯೂ ದುಷ್ಯಂತನಿಗೆ ತಿಳಿಯಪಡಿಸುವಳು. | ೨. ಶಕುಂತಲೆಯ ಜನನ ವೃತ್ತಾಂತವು ಆಕೆಯ ಸಖಿಯ ಮೂಲಕ ಮಿತೋಚಿತ ವಚನಗಳಿಂದ ದುಷ್ಯಂತನಿಗೆ ತಿಳಿಯುವುದು. |
| ೩. ದುಷ್ಯಂತ ಶಕುಂತಲೆಯರಿಗೆ ಪರಸ್ಪರ ದರ್ಶನವಾದ ಸ್ವಲ್ಪ ಹೊತ್ತಿನಲ್ಲೇ ಅವರಿಗೆ ಗಾಂಧರ್ವ ವಿವಾಹವು ನಡೆದುಹೋಗುವುದು. | ೩. ನಾಯಿಕಾ ನಾಯಕರಿಗೆ ಪರಸ್ಪರಾವಲೋಕನವಾದ ಮೇಲೆ ಅವರ ಅನುರಾಗವು ಕೆಲವು ದಿನಗಳಲ್ಲಿ ಚೆನ್ನಾಗಿ ಪ್ರವೃದ್ಧವಾಗಿ ಬಳಿಕ ಅವರಿಗೆ ಗಾಂಧರ್ವ ವಿವಾಹವು ನಡೆಯುವುದು. |

**ಮಹಾಭಾರತದ ಕಥೆ**

೪. ವಿವಾಹಕ್ಕೆ ಮುಂಚೆ ದುಷ್ಯಂತನು ಶಕುಂತಲೆಗೆ ವಸ್ತ್ರಾಭರಣಗಳನ್ನು ಕೊಡುವೆನೆಂದೂ ತನ್ನ ರಾಜ್ಯವೆಲ್ಲವೂ ಆಕೆಯ ವಶವಾಗುವುದೆಂದೂ ವಾಗ್ದಾನಮಾಡುವನು. ಶಕುಂತಲೆಯು ತನ್ನ ಹೊಟ್ಟೆಯಲ್ಲಿ ಜನಿಸುವ ಮಗನಿಗೆ ಯೌವರಾಜ್ಯ ಪಟ್ಟಾಭಿಷೇಕವನ್ನು ಮಾಡುವ ಪಕ್ಷದಲ್ಲಿ ವಿವಾಹವನ್ನು ಮಾಡಿಕೊಳ್ಳುವುದಾಗಿ ತಿಳಿಸುವಳು.

೫. ವಿವಾಹವಾದ ಕೂಡಲೇ ದುಷ್ಯಂತನು ಕಣ್ವಮುನಿಗಳ ಭಯದಿಂದ ಆಶ್ರಮವನ್ನು ಬಿಟ್ಟು ಹೊರಡುವನು. ಆಶ್ರಮದ ಹೊರಗಡೆಯಲ್ಲಿಯೇ ತನ್ನ ಪರಿಜನರು ಇದ್ದರೂ ರಾಜಧಾನಿಯಿಂದ ತಕ್ಕ ಪರಿಜನರನ್ನು ಕಳುಹಿಸಿಕೊಟ್ಟು ಶಕುಂತಲೆಯನ್ನು ತನ್ನ ಬಳಿಗೆ ಕರೆಯಿಸಿಕೊಳ್ಳುವುದಾಗಿ ಹೇಳಿ ಹೊರಟುಹೋಗುವನು.

೬. ... ...

**ನಾಟಕದ ಕಥೆ**

೪. ನಾಯಕ ನಾಯಕಿಯರಿಗೆ ವಿವಾಹವಾಗುವುದಕ್ಕೆ ಮುಂಚೆ 'ನಿಬಂಧನೆ'ಗಳಾವುವೂ ಆಗಿಲ್ಲ.

೫. ನಾಯಕ ನಾಯಕಿಯರಿಗೆ ಪರಸ್ಪರಾನುರಾಗವು ಅಂಕುರಿಸಿದ ಕೂಡಲೆ ಕಾಡಾನೆಯ ಸುದ್ದಿಯ ಮೂಲಕ ಅವರನ್ನು ಅಗಲುವರು. ಋಷಿಗಳ ಯಜ್ಞಸಂರಕ್ಷಣಾರ್ಥವಾಗಿ ನಾಯಕನು ಆಶ್ರಮದಲ್ಲೇ ಉಳಿದುಕೊಳ್ಳುವನು. ರಾಜಮಾತೆಯು ಆಚರಿಸುತ್ತಿದ್ದ ಪುತ್ರಪಿಂಡಪಾಲನ ವ್ರತಕ್ಕಾಗಿ ತನ್ನ ಪ್ರತಿನಿಧಿಯನ್ನಾಗಿ ವಿದೂಷಕನನ್ನು ತನ್ನ ಪರಿಜನರೊಡನೆ ರಾಜಧಾನಿಗೆ ಕಳುಹಿಸುವನು.

೬. ಸುಪ್ರವೃದ್ಧವಾಗಿದ್ದ ಅನುರಾಗದಿಂದ ಬದ್ಧರಾದ ನಾಯಕ ನಾಯಕಿಯರು ಪರಸ್ಪರ ಅಗಲು

| ಮಹಾಭಾರತದ ಕಥೆ | ನಾಟಕದ ಕಥೆ |
| --- | --- |
| | ವುದಕ್ಕೆ ಮುಂಚೆ ಅಭಿಜ್ಞಾನಾರ್ಥವಾಗಿಯೂ ವಿರಹಶಾಂತಿಗಾಗಿಯೂ ಶಕುಂತಲೆಗೆ ದುಷ್ಯಂತನು ತನ್ನ ನಾಮಾಂಕಿತವಾದ ಉಂಗುರವನ್ನು ಕೊಟ್ಟು ಆಕೆಯನ್ನು ನಂಬಿಸಿ ತನ್ನ ರಾಜಧಾನಿಗೆ ಹೊರಡುವನು. |
| ೭. ... ... | ೭. ಮಾರ್ಗವಶದಿಂದ ಕಣ್ವಾಶ್ರಮಕ್ಕೆ ಬಂದ ದೂರ್ವಾಸರು ತಮಗೆ ಸತ್ಕಾರ ಮಾಡದಿದ್ದ ಶಕುಂತಲೆಯನ್ನು ಆಕೆಯ ಪ್ರಿಯನು ಮರೆತುಬಿಡಲೆಂದು ಶಪಿಸುವರು. ಆಗ ಆಕೆಯ ಸಖಿಯರು ಮುನಿಯನ್ನು ಸಂತೈಸಿ ಅಭಿಜ್ಞಾನದರ್ಶನದ ಮೂಲಕ ಶಾಪನಿವೃತ್ತಿಯಾಗುವುದೆಂಬ ಅನುಗ್ರಹವನ್ನು ಪಡೆಯುವರು. |
| ೮. ರಾಜಧಾನಿಗೆ ಹಿಂದಿರುಗಿದ ದುಷ್ಯಂತನು ಜನಾಪವಾದ ಭೀತಿಯಿಂದ ಶಕುಂತಲೆಯನ್ನು ತನ್ನ ಬಳಿಗೆ ಕರೆಯಿಸಿಕೊಳ್ಳಲಿಲ್ಲ. | ೮. ದುಷ್ಯಂತನು ರಾಜಧಾನಿಗೆ ಹಿಂದಿರುಗಿದ ಮೇಲೆ, ಯಾರನ್ನೋ ಮರೆತಂತೆ ಬೋಧೆಯಾಗುತ್ತಿದ್ದರೂ ದೂರ್ವಾಸಶಾಪಮಾಹಾತ್ಮ್ಯದಿಂದ ಶಕುಂತಲೆಯನ್ನೇ ಮರೆತಿದ್ದುದೆಂದು ತಿಳಿಯದೆ ಕಳವಳಪಟ್ಟುಕೊಳ್ಳುತ್ತಿದ್ದನು. |
| ೯. ದುಷ್ಯಂತನು ಹಿಂದಿರುಗಿದ | ೯. ದುಷ್ಯಂತನು ಹೊರಟು |

**ಮಹಾಭಾರತದ ಕಥೆ**

ಕೆಲವು ಕಾಲದಲ್ಲಿಯೇ ಸರ್ವದಮನನು ಜನಿಸಿದನು. ಅವನಿಗೆ ಆರು ವರ್ಷಗಳು ವಯಸ್ಸಾಗುವ ವರೆಗೂ ಶಕುಂತಲೆಯು ಕಣ್ವಾಶ್ರಮದಲ್ಲೇ ಇದ್ದಳು.

೧೦. ಋಷಿಶಿಷ್ಯರೊಡನೆ ದುಷ್ಯಂತನ ಬಳಿಗೆ ಬಂದ ಶಕುಂತಲೆಯು ತನ್ನ ಪತಿಗೆ ಆತನ ವಾಗ್ದಾನವನ್ನು ಜ್ಞಾಪಿಸಿ, ತನ್ನನ್ನೂ ತನ್ನ ಪುತ್ರನನ್ನೂ ಪರಿಗ್ರಹಿಸಬೇಕೆಂದು ಕೇಳಿಕೊಳ್ಳುವಳು. ರಾಜನು ಅವರನ್ನು ಸ್ವೀಕರಿಸದಿದ್ದುದನ್ನು ನೋಡಿ ಶಕುಂತಲೆಯು ಹೊರಟುಹೋಗಲು ಪ್ರಯತ್ನಿಸುತ್ತಿದ್ದಾಗ, ಆಕಾಶವಾಣಿಯು ಕೇಳಬಂದು, ಕಡೆಗೆ ದುಷ್ಯಂತನು ಪತ್ನೀಪುತ್ರರನ್ನು ಪರಿಗ್ರಹಿಸುವನು.

೧೧. ... ...

**ನಾಟಕದ ಕಥೆ**

ಹೋದ ಸ್ವಲ್ಪ ಹೊತ್ತಿನಲ್ಲೇ ಹಿಂದಿರುಗಿದ ಕಣ್ವರು, ಎಲ್ಲವನ್ನೂ ತಿಳಿದು ತಮ್ಮ ಮಗಳನ್ನು ಆಶೀರ್ವದಿಸಿ ಬಹಳ ಆದರದಿಂದ ಆಕೆಯನ್ನು ಪತಿಗೃಹಕ್ಕೆ ಕಳುಹಿಸಿಕೊಟ್ಟರು. ಈ ಕಾಲದಲ್ಲಿ ಶಕುಂತಲೆಯು ಅಂತರ್ವತ್ನಿಯಾಗಿದ್ದಳು.

೧೦. ಪರಸ್ತ್ರೀಯೆಂಬ ಭಾವನೆಯಿಂದ ದುಷ್ಯಂತನು ಶಕುಂತಲೆಯನ್ನು ಪರಿಗ್ರಹಿಸದಿರಲು, ಆಕೆಯು ಪ್ರಸವಿಸುವ ವರೆಗೂ ರಾಜಪುರೋಹಿತನ ಮನೆಯಲ್ಲಿರುವಂತೆ ಏರ್ಪಾಡಾಗುವುದು. ಆದರೆ ಪುರೋಹಿತನ ಹಿಂದೆ ಆಕೆಯು ತನ್ನ ದುರವಸ್ಥೆಗಾಗಿ ಶೋಕಪಡುತ್ತ ಹೋಗುತ್ತಿದ್ದ ಶಕುಂತಲೆಯನ್ನು ಮೇನಕೆಯು ಅದೃಶ್ಯಳನ್ನಾಗಿ ಮಾಡಿ ಕರೆದುಕೊಂಡು ಹೋಗುವಳು.

೧೧. ಮೇನಕೆಯು ಶಕುಂತಲೆಯನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ಹೋಗಿ ಸ್ವರ್ಗಕ್ಕೂ ಮರ್ತ್ಯಲೋಕಕ್ಕೂ ಮಧ್ಯದಲ್ಲಿದ್ದ ಮಾರೀಚಾಶ್ರಮದಲ್ಲಿ ಆಕೆಯನ್ನು ಬಿಡುವಳು. ಇಲ್ಲಿ ಆಕೆಗೆ ಪುತ್ರ

| ಮಹಾಭಾರತದ ಕಥೆ | ನಾಟಕದ ಕಥೆ |
| --- | --- |
| | ಜನನವಾಗುವುದು. ಮೇನಕೆಯೂ ದಾಕ್ಷಾಯಣಿಯನ್ನು ಸೇವಿಸುತ್ತ ತನ್ನ ಮಗಳ ಬಳಿಯಲ್ಲೇ ಇದ್ದು ಕೊಂಡಿರುವಳು. |
| ೧೨. ... ... | ೧೨. ಇಂದ್ರನ ಸಹಾಯಕ್ಕಾಗಿ ದುಷ್ಯಂತನು ಸ್ವರ್ಗಲೋಕಕ್ಕೆ ಹೋಗಿ ಅಲ್ಲಿ ಹಾವಳಿಮಾಡುತ್ತಿದ್ದ ಕಾಲನೇಮಿಪುತ್ರರನ್ನು ಜಯಿಸಿ, ಇಂದ್ರನ ಅಪ್ಪಣೆಯನ್ನು ಪಡೆದು ಹಿಂದಿರುಗಿ ಬರುತ್ತಿದ್ದಾಗ ಮಾರೀಚಾಶ್ರಮವನ್ನು ಸಂದರ್ಶಿಸಲು ಅಲ್ಲಿಗೆ ಹೋದನು. ಆಗ ಸರ್ವದಮನನ ಬಾಲಲೀಲೆಗಳಿಂದಲೇ ಕುತೂಹಲಾವಿಷ್ಟನಾಗಿ ಅವನ ವಿಷಯವನ್ನು ವಿಚಾರಮಾಡುತ್ತಿದ್ದಾಗ ದುಷ್ಯಂತನಿಗೂ ಶಕುಂತಲೆಗೂ ಸಂಘಟನೆಯಾಗುವುದು. |

**ಈ ವ್ಯತ್ಯಾಸಗಳಿಗೆ ಕಾರಣಗಳೂ ಔಚಿತ್ಯಗಳೂ**—ಕವಿಕುಲಗುರುವಾದ ಕಾಳಿದಾಸನಿಗೆ ಮಹಾಭಾರತದ ಕಥೆಯಲ್ಲಿ ಅನೇಕ ಹುಳುಕುಗಳು ಕಂಡುಬಂದಿವೆ. ಆದುದರಿಂದಲೇ—

> ಯದತ್ರಾನುಚಿತಂ ಕಿಂಚಿನ್ನಾಯಕಸ್ಯ ರಸಸ್ಯ ವಾ ।
> ವಿರುದ್ಧಂ ತತ್ಪರಿತ್ಯಾಜ್ಯಮನ್ಯಥಾ ವಾ ಪ್ರಕಲ್ಪಯೇತ್ ॥

ಎಂಬ ಸಂಕೇತಕ್ಕೆ ಅನುಸಾರವಾಗಿ ತನ್ನ ನಾಟಕದ ವಸ್ತುವಿನಲ್ಲಿ ಅನೇಕ ಮಾರ್ಪಾಡುಗಳನ್ನು ಮಾಡಿಕೊಂಡಿರುವನು. ಇಂತಹ ಪ್ರತಿಯೊಂದು ಮಾರ್ಪಾಡಿಗೂ ಕಾರಣವನ್ನೂ ಔಚಿತ್ಯವನ್ನೂ ಕಲ್ಪಿಸಬಹುದಾದರೂ

ಮೇಲೆ ಹೇಳಿದ ಮುಖ್ಯವಾದ ಕೆಲವು ವಿಷಯುಗಳನ್ನು ಮಾತ್ರ ಕುರಿತು ವಿವರಿಸಲಾಗುವುದು.

ಭಾರತದ ಕಥೆಯಲ್ಲಿ ದುಷ್ಯಂತನು ಕಾಮುಕಸಾಮಾನ್ಯನಂತೆ ಶಕುಂತಲೆಯುನ್ನು ಕಂಡಕೂಡಲೇ ಮೋಹಪರವಶನಾಗುವನು. ಶಕುಂತಲೆಯು ದುಷ್ಯಂತನನ್ನು ಕಂಡಕೂಡಲೇ ನಗರವಾಸಿಯಾದ ಕನ್ಯೆಯಂತೆ ಆತನು ಇಂತಹನೇ ಎಂದು ಗುರುತು ಕಂಡುಹಿಡಿದು ಬಿಡುವಳು. ಆದರೆ ಪ್ರಜೆಗಳ ತನುಧನಗಳನ್ನು ಕಾಪಾಡಬೇಕಾದ ರಾಜನು ಪರ್ಣಶಾಲೆಯಲ್ಲಿ ಒಬ್ಬೊಂಟಿಗಳಾಗಿದ್ದ ಶಕುಂತಲೆಯುನ್ನು ಕಾಣುವುದು ಅನುಚಿತವೆಂಬು ತೋರಿದುದರಿಂದ ಶಕುಂತಲೆಯು ಆಶ್ರಮದ ಗಿಡಬಳ್ಳಿಗಳಿಗೆ ನೀರೆರೆಯುವುದನ್ನೂ, ಈಕೆಗೆ ಸಹಾಯುಮಾಡಲು ಸಮವಯೋರೂಪಯುಕ್ತರಾದ ಸಖಿಗಳನ್ನೂ, ಅವರ ಮನೋಹರವಾದ ಸರಸಸಲ್ಲಾಪಗಳನ್ನೂ, ಕಾಳಿದಾಸನು ಏರ್ಪಡಿಸಿರುವನು. ಇದರಿಂದ ಋಷಿಕನ್ಯಕೆಯರು ತಮ್ಮ ಆಶ್ರಮವೃಕ್ಷಗಳ ವಿಷಯದಲ್ಲಿ ಹೇಗೆ ಕರುಣಾಶಾಲಿಗಳಾಗಿದ್ದರೆಂದು ವ್ಯಕ್ತವಾಗುವುದಲ್ಲದೆ ಶಕುಂತಲೆಯು ಕೋಮಲಹೃದಯವೂ ವ್ಯಕ್ತವಾಗುವುದು. ಸ್ವಲ್ಪಹೊತ್ತು ಆಕೆಯುನ್ನು ನೋಡುತ್ತಿದ್ದ ದುಷ್ಯಂತನು ತನ್ನ ಆಭಿಜಾತ್ಯಕ್ಕೆ ತಕ್ಕಂತೆ ಶಕುಂತಲೆಯು ತನ್ನ ವರ್ಣಕ್ಕೆ ಮೀರಿದವಳೋ ಏನೋ ಎಂದು ಸಂಶಯಿಸುವಂತೆ ಕವಿಯು ಏರ್ಪಡಿಸಿರುವುದು ಬಹಳ ಉಚಿತವಾಗಿರುವುದು. ನಾಟಕದಲ್ಲಿ ನಾಯಿಕಾ ನಾಯಕರಿಗೆ ಸಮಾಗಮ ಉಂಟಾಗಿರುವುದೂ ಬಹಳ ಮನೋಹರವಾಗಿರುವುದು. ಅನಂತಸಾಗರವನ್ನು ದಾಟಿ ಲಂಕಾಧಿಪತಿಯುನ್ನು ಜಯಿಸಲು ಶ್ರೀರಾಮಚಂದ್ರನಿಗೆ ವಾನರ ಭಲ್ಲೂಕಾದಿ ಜಂತುಗಳು ಸಹಾಯಮಾಡಿದಂತೆಯೇ ಆ ಸಮುದ್ರಕ್ಷಿತೀಶನಾದ ದುಷ್ಯಂತನಿಗೂ ಕಣ್ವಮಹರ್ಷಿಗಳ ಪಾಲಿತಪುತ್ರಿಯಾಗಿ ಆಶ್ರಮಮಧ್ಯದಲ್ಲಿದ್ದ ಶಕುಂತಲೆಗೂ ಸಂಘಟನೆಯುನ್ನುಂಟುಮಾಡಲು ಈ ನಾಟಕದಲ್ಲಿ, ಅಲ್ಪಜಂತುವಾದ ಒಂದು ಭ್ರಮರವು ಸಹಾಯುಮಾಡಿದೆ. ಈ ಭ್ರಮರವೃತ್ತಾಂತದಿಂದ ಪ್ರಿಯುಪ್ರೇಯುಸಿಯುರ ಸಮಾಗಮ ಮಾತ್ರವಾಗಿರುವುದಲ್ಲದೆ ನಾಟಕದ ನಾಯಕಿಗೂ ಒಂದು ಬಗೆಯ ಸೌರಭವು ಪ್ರಾಪ್ತವಾಗಿರುವುದು ರಸಜ್ಞರಿಗೆ

ಕಂಡುಬರುವುದು. ಪುಷ್ಪಸೌರಭಲೋಲುಪವಾದ ಭ್ರಮರವು ಶಕುಂತಲೆಯ ದೇಹಪರಿಮಳ ಲೌಭ್ಯದಿಂದ ಆಕೆಯ ಸುತ್ತಲೂ ಹಾರಾಡುತ್ತ ಆಕೆಯು ಸ್ತ್ರೀಜಾತಿಯಲ್ಲಿ ಅತ್ಯುತ್ತಮವಾದ ಪದ್ಮಿನೀ ಜಾತಿಗೆ ಸೇರಿದವಳು ಎಂದು ಸರಸಿಗಳಾದ ಪ್ರೇಕ್ಷಕರಿಗೂ ವಾಚಕರಿಗೂ ಝೇಂಕರಿಸಿ ಹೇಳುತ್ತಿರುವಂತಿದೆ.

ಬಾಲ್ಯಾವಸ್ಥೆಯನ್ನು ದಾಟಿ ತರುಣಿಯಾಗಿದ್ದ ಶಕುಂತಲೆಯು, ತಾಯಿಯಾದ ಮೇನಕೆಯು ತಪೋನಿರತನಾಗಿದ್ದ ವಿಶ್ವಾಮಿತ್ರ ಋಷಿಯನ್ನು ತನ್ನ ಮನೋಹರಾಕಾರದಿಂದ ಹೇಗೆ ಮೋಹಗೊಳಿಸಿದಳೆಂಬ ವೃತ್ತಾಂತವನ್ನು ಆಗತಾನೆ ತಪೋವನಕ್ಕೆ ಬಂದಿದ್ದ ನಡುಹರೆಯದ ದುಷ್ಯಂತನ ಇದಿರಿನಲ್ಲಿ ವಿಸ್ತಾರವಾಗಿ ವಿವರಿಸಿರುವುದನ್ನು ನೋಡಿದರೆ, ಇಂತಹ "ಗಂಡುಬೀರಿ"ಗಳು ಮಹಾಭಾರತದ ಕಾಲದಲ್ಲಿಯೂ ಇದ್ದರೆ! ಎಂದು ಆಧುನಿಕರಾದ ನಮಗೂ ಆಶ್ಚರ್ಯವಾಗುವುದು. ಕಾಳಿದಾಸನಿಗಂತೂ ಇಂತಹ ನಡೆವಳಿಕೆಯನ್ನು ನೋಡಿ ಅಸಹ್ಯವೇ ಆಗಿದ್ದೀತು. ಆದುದರಿಂದಲೇ ಈ ಲಜ್ಜಾಸ್ಪದವಾದ ಸಂಗತಿಯನ್ನು ಆತನು ತನ್ನ ಕಥಾನಾಯಕಿಯ ಸಖಿಯ ಬಾಯಿಂದ ಹೇಳಿಸಿರುವನು. ಹೀಗೆ ಹೇಳಿಸುವುದರಲ್ಲಿಯೂ ಅರ್ಧೋಕ್ತಿಮಾತ್ರದಿಂದಲೇ ವಿಷಯಸೂಚನೆ ಮಾಡಿಸಿರುವುದರಿಂದ, ಲಜ್ಜಾಭೂಷಣರಾದ ಸ್ತ್ರೀಯರ ಸಮುದಾಯಕ್ಕೇ ಅತ್ಯಂತ ಗೌರವವನ್ನು ತೋರಿಸಿದಂತಾಗಿರುವುದು. ಇಷ್ಟು ಮಾತ್ರವಲ್ಲದೆ—"ಉಳಿದೆಲ್ಲವೂ ತಿಳಿವೇ ಇರುವುದು" ಎಂದು ದುಷ್ಯಂತನ ಬಾಯಿಂದ ಹೇಳಿಸಿರುವುದರಿಂದ ಆತನ ಘನತೆಗೂ ಒಂದು ನಿದರ್ಶನವನ್ನು ಸೂಚಿಸಿದಂತಾಗಿರುವುದು.

ಮಹಾಭಾರತದ ಕಥೆಯಲ್ಲಿ ನಾಯಿಕಾನಾಯಕರಿಗೆ ಆದ ವಿವಾಹವು ಧನಪಿಶಾಚಗ್ರಸ್ತರಾದ ಕೆಲವರು ಏರ್ಪಡಿಸಿಕೊಳ್ಳುವ ಹಾಸ್ಯಾಸ್ಪದವಾದ ಮದುವೆಯಂತಿರುವುದು. ಒಂದು ಕಡೆ, ದುಷ್ಯಂತನು ತನ್ನನ್ನು ಮದುವೆಯಾಗುವ ಪಕ್ಷಕ್ಕೆ ಶಕುಂತಲೆಗೆ ವಸ್ತ್ರಾಭರಣಗಳನ್ನೂ ತನ್ನ ರಾಜ್ಯವನ್ನೂ ಕೂಡ ಕೊಡುವುದಾಗಿ ಹೇಳುತ್ತಿರುವನು; ಮತ್ತೊಂದು ಕಡೆ, ಶಕುಂತಲೆಯೂ ತನ್ನ ಗರ್ಭದಲ್ಲಿ ಜನಿಸುವ ಮಗನಿಗೆ ಯುವ

ರಾಜಪಟ್ಟಾಭಿಷೇಕವನ್ನು ಮಾಡುವ ಪಕ್ಷದಲ್ಲಿ ಮದುವೆಗೆ ಒಪ್ಪುವು ದಾಗಿ ಹೇಳುತ್ತಿರುವಳು. ಭಾರತದ ಕಥೆಯಲ್ಲಿ ಶಕುಂತಲೆಯು ಅನು ರಾಗವು ಕಂಡುಬರುವುದೇ ಇಲ್ಲ. ದುಷ್ಯಂತನ ಈ ನಡತೆಯು ವೈಶಿಕ ಚರ್ಯದ ಹಾಗೆಯೂ, ಶಕುಂತಲೆಯ ಈ ನಡವಳಿಕೆಯು ದ್ರವ್ಯಲೋಭಾ ವಿಷ್ಟರಾದ ದೇಹವಿಕ್ರಯಿಗಳ ಆಚರಣೆಯ ಹಾಗೆಯೂ ಕಾಳಿದಾಸನಿಗೆ ತೋರಿಬಂದಿರುವುದು. ಈ ಬಗೆಯ ನಿಬಂಧನೆಗಳಿಂದ ನಡೆಯುವ ವಿವಾಹಸಂಬಂಧಗಳನ್ನು ಯಾವ ವಿವಾಹತತ್ವಜ್ಞನೂ ಒಪ್ಪಲಾರನು. ಹೀಗಿರುವಾಗ ರಸಜ್ಞಶಿಖಾಮಣಿಯಾದ ಕಾಳಿದಾಸನು ಇಂತಹ ವೃತ್ತಾಂತವನ್ನು ಸಹಿಸುವನೆ? ಆದುದರಿಂದಲೇ ಆತನು ಸ್ವಾರ್ಥಪರ ತೆಯ ಈ ನಿಬಂಧವೃತ್ತಾಂತದ ವಿಷಯದಲ್ಲಿ ಮೌನವನ್ನು ಅವಲಂಬಿಸಿ ತನ್ನ ನಾಯಿಕಾ ನಾಯಕರ ಪ್ರೇಮವು ನಿರ್ವ್ಯಾಜವಾದುದೆಂದು ಸೂಚಿ ಸಿರುವನು.

ನಾಯಿಕಾನಾಯಕರು ಒಬ್ಬರನೊಬ್ಬರು ನೋಡಿದ ಕೂಡಲೇ ಅವರವರಿಗೆ ವಿವಾಹವಾಗುವುದು ಅಸಂಸ್ಕೃತರಾದ ತರುಣರಿಗೆ ಯುಕ್ತ ವಾದುದೇ ಹೊರತು ದೊಡ್ಡ ದೊರೆಯಾದ ದುಷ್ಯಂತನಿಗೂ ತಪೋವನ ದಲ್ಲಿ ಕಣ್ವಮಹರ್ಷಿಗಳ ಪಾಲನೆಯಲ್ಲಿ ಇರುತ್ತಿದ್ದ ಶಕುಂತಲೆಗೂ ಸರ್ವಥಾ ಯೋಗ್ಯವಲ್ಲ. ಮಹಾಭಾರತದ ಕಥೆಯ ದುಷ್ಯಂತನು ಸ್ವಸು ಖೈಕಪರಾಯಣರಾದ ಕೆಲವರು ದುಷ್ಪ್ರಭುಗಳಂತೆ ತೋರಿಬರುವನು. ಆದುದರಿಂದಲೇ ಕಾಳಿದಾಸನು ತನ್ನ ನಾಟಕದಲ್ಲಿ ನಾಯಕನಾಯಕಿ ಯರನ್ನು ಸಂಪೂರ್ಣವಾಗಿ ಮಾರ್ಪಡಿಸಿ ಚಿತ್ರಿಸಿರುವನು. ಕಾಳಿದಾ ಸನ ದುಷ್ಯಂತನಿಗೆ ತಪೋವನಸ್ತ್ರೀಯರನ್ನು ನೋಡಬೇಕಾದರೂ ಎಷ್ಟೋ ಸಂಕೋಚ. ಆದುದರಿಂದ ಗಿಡಗಳ ಮರೆಯಲ್ಲಿ ನಿಂತು ಅವರನ್ನು ನೋಡುತ್ತಿದ್ದು, ಮಧುಪಬಾಧೆಯಿಂದ ಪೀಡಿತಳಾಗಿದ್ದ ಶಕುಂತಲೆ ಯನ್ನು ಆಕೆಯ ಸಖಿಯರು ಕಾಪಾಡದೆ ಉಪೇಕ್ಷೆಯಿಂದಿದ್ದಾಗ ಆರ್ತ ರಕ್ಷಣ ಪರಾಯಣನಾದ ದುಷ್ಯಂತನು ಆಕೆಗೆ ಸಂಭವಿಸಿದ್ದ ಪೀಡೆಯನ್ನು ಪರಿಹರಿಸಲು ಕಾಣಿಸಿಕೊಳ್ಳುವನು. ಹೀಗೆ ಪರಸ್ಪರ ದರ್ಶನವಾದ ಮೇಲೆ ದುಷ್ಯಂತನು ಶಕುಂತಲೆಯ ವಿಷಯದಲ್ಲಿ ಆಕೆಯು ಯಾರೆಂಬು

ದನ್ನು ತಿಳಿದುಕೊಳ್ಳಲು ಕುತೂಹಲಯುಕ್ತನಾಗಿದ್ದುದನ್ನೂ, ಆ ಬಳಿಕ ಅವರಿಬ್ಬರಿಗೂ ಅನುರಾಗವು ಅಂಕುರಿಸಿ ಕ್ರಮಕ್ರಮವಾಗಿ ವೃದ್ಧಿಯಾದುದನ್ನೂ, ನಾಟಕದಲ್ಲಿ ಮನೋಹರವಾಗಿ ಸೂಚಿಸಿರುವನು. ಕಾಡಾನೆಯ ಸುದ್ದಿಯಿಂದ ನಾಯಕನಾಯಕಿಯರನ್ನು ಅಗಲಿಸಿ ಅವರ ಅನುರಾಗವು ಮತ್ತಷ್ಟು ಚೆನ್ನಾಗಿ ಅಭಿವೃದ್ಧಿಯಾಗುವುದಕ್ಕೋಸ್ಕರ ಪ್ರಥಮದರ್ಶನಕ್ಕೂ ವಿವಾಹಕ್ಕೂ ಐದಾರು ದಿವಸಗಳ ಅಂತರವಿರುವಂತೆಯೂ, ಋಷಿಗಳ ಇಷ್ಟಿಸಂರಕ್ಷಣಾರ್ಥಕ್ಕಾಗಿ ದುಷ್ಯಂತನು ಸ್ಥಲಾಂತರದಲ್ಲಿ ಇರುವಂತೆಯೂ ಸಂವಿಧಾನಕೌಶಲವನ್ನು ಏರ್ಪಡಿಸಿರುವನು. ಹೀಗೆ ವಿಪ್ರಲಂಭದ ಮೂಲಕ ನಾಯಕನಾಯಕಿಯರಿಗೆ ಅನುರಾಗವು ರೂಢಮೂಲವಾದ ಬಳಿಕ ಅವರಿಗೆ ಗಾಂಧರ್ವವಿವಾಹವಾಗುವಂತೆ ವರ್ಣಿಸಿರುವುದು ಎಷ್ಟೋ ಉಚಿತವಾಗಿಯೂ ಸ್ವಾಭಾವಿಕವಾಗಿಯೂ ಮನೋಹರವಾಗಿಯೂ ಇರುವುದು.

ಗಾಂಧರ್ವ ವಿವಾಹವಾದ ಕೂಡಲೆ ಭಾರತದ ದುಷ್ಯಂತನು ಶಕುಂತಲೆಯನ್ನು ಬಿಟ್ಟು ಹೊರಡುವನು. ಈ ಸಮಯದಲ್ಲಿ ತನ್ನ ಪರಿಜನರು ಆಶ್ರಮದ ಹೊರವಳಯದಲ್ಲಿಯೇ ಇದ್ದರೂ ರಾಜಧಾನಿಗೆ ಹಿಂದಿರುಗಿ ಅಲ್ಲಿಂದ ಪರಿಜನರನ್ನು ಕಳುಹಿಸಿ ಶಕುಂತಲೆಯನ್ನು ಕರೆಯಿಸಿಕೊಳ್ಳುವುದಾಗಿ ನಿಜಾಂಶವನ್ನು ಮರೆಮಾಜುವನು. ದಾರಿಯಲ್ಲಿ ಹೋಗುತ್ತಿರುವಾಗಲೂ ದುಷ್ಯಂತನಿಗೆ ಒಂದು ಚಿಂತೆ; ಫಲಗಳನ್ನು ತರುವುದಕ್ಕಾಗಿ ಹೋಗಿದ್ದ ಕಣ್ವಮಹರ್ಷಿಗಳು ಆಶ್ರಮಕ್ಕೆ ಹಿಂದಿರುಗಿ ಬಂದು ತಾನು ನಡೆಯಿಸಿದ್ದ ಕೆಲಸದ ವಿಷಯದಲ್ಲಿ ಏನೆನ್ನುವರೋ ಎಂಬುದೇ ಇದು. ಭಯಮೂಲವಾದ ಈ ಚಿಂತೆಯಿಂದಲೇ ಆಶ್ರಮವನ್ನು ಬಿಟ್ಟು ಹೊರಡಲು ಅಷ್ಟು ಜಾಗ್ರತೆ ಮಾಡಿದುದು ಎಂದು ಪಾಠಕರ ಮನಸ್ಸಿಗೆ ಸುಲಭವಾಗಿ ತೋರುವುದು. ಇಂತಹ ಅಂಜುಬುರುಕನೂ ಅನೃತವಾದಿಯೂ ಆದವನನ್ನು ಕಾಳಿದಾಸನು ತನ್ನ ನಾಟಕದ ನಾಯಕನನ್ನಾಗಿ ಪರಿಗ್ರಹಿಸಲು ಹೇಗೆ ಒಪ್ಪುವನು? ಆದುದರಿಂದ ಆತನು ನಾಟಕದಲ್ಲಿ ಮೊದಲು ನಾಯಕ ನಾಯಕಿಯರಿಗೆ ಪರಸ್ಪರ ದರ್ಶನವನ್ನುಂಟು ಮಾಡಿಸಿ, ನಾಯಕಿಗೆ ನಾಯಕನಲ್ಲಿ ಅನುರಾಗವನ್ನು

ಸೂಚಿಸಿ, ಒಂದುವೇಳೆ ನಾಯಕಿಯು ತನ್ನ ವರ್ಣಕ್ಕೆ ಹೆಚ್ಚಿನವಳೋ ಏನೋ ಎಂಬ ಸಂಶಯವನ್ನು ನಾಯಕನಲ್ಲಿ ತಲೆದೋರಿಸಿ, ಆದನ್ನು ಅನೇಕ (ಒಂದು ಮಾತ್ರವಲ್ಲದ) ಪ್ರಮಾಣಗಳಿಂದ ಹೋಗಲಾಡಿಸಿ, ಅವರ ಅನುರಾಗವು ಅಭಿವೃದ್ಧಿಯಾಗುವ ಉದ್ದೇಶದಿಂದಲೇ ಕಾಡಾನೆಯ ನೆವದಿಂದ ಅವರನ್ನು ಸ್ವಲ್ಪಕಾಲ ಅಗಲಿಸಿ ಶಿಷ್ಟರಕ್ಷಣಪರಾಯಣನಾದ ರಾಜನು ಋಷಿಗಳ ಇಷ್ಟಿಸಂರಕ್ಷಣಾರ್ಥವಾಗಿ ಆ ಆಶ್ರಮದಲ್ಲೇ ಸ್ಥಲಾಂತರದಲ್ಲಿರುವಂತೆ ಏರ್ಪಡಿಸಿರುವನು. ತಪೋವನದ ಹೊರವಳಯದಿಂದ ಪರಿಜನರನ್ನು ಪ್ರತ್ಯೇಕಿಸುವುದಕ್ಕಾಗಿ ರಾಜಮಾತೆಯ ವ್ರತಪ್ರಸಕ್ತಿಯೂ ಅದಕ್ಕಾಗಿ ರಾಜನು ಮಾಢವ್ಯನನ್ನು ತನ್ನ ಪ್ರತಿನಿಧಿಯಾಗಿ ಸಕಲಪರಿವಾರದೊಡನೆ ರಾಜಧಾನಿಗೆ ಕಳುಹಿಸುವ ವೃತ್ತಾಂತವೂ ವರ್ಣಿತವಾಗಿರುವುವು. ಯಜ್ಞರಕ್ಷಣಕಾರ್ಯದಲ್ಲಿ ಸ್ವಲ್ಪ ಬಿಡುವಾದಾಗ ದುಷ್ಯಂತನು ತನ್ನ ಅನುರಾಗದಿಂದ ಪೀಡಿತನಾಗಿ ಲತಾಗೃಹದ ಬಳಿಯಲ್ಲಿ ತಿರುಗಾಡುತ್ತಿರುವಾಗ ಶಕುಂತಲೆಯನ್ನು ಪುನಃ ಸಂಧಿಸುವನು. ಈ ಸಂಘಟನೆಗೆ ಮುಂಚೆ ಶಕುಂತಲೆಯ ಪ್ರತಿಷೇಧವೂ ದುಷ್ಯಂತನ ಸಮಾಧಾನಗಳೂ ಎಷ್ಟೋ ಗಂಭೀರವಾಗಿಯೂ ಸಹಜವಾಗಿಯೂ ಇರುವುವು. ಈ ಸಮಯದಲ್ಲಿ ಆ ಸ್ಥಳಕ್ಕೆ ಗೌತಮಿಯು ಶಾಂತ್ಯುದಕವನ್ನು ತರುತ್ತಿದ್ದುದರಿಂದ ಇದರ ಸುಳಿವು ನಾಯಿಕಾನಾಯಕರಿಗೆ ಗೊತ್ತಾಗಿ ಇಬ್ಬರೂ ಪರಸ್ಪರ ಒಪ್ಪಿಗೆಯಿಂದ ಅಗಲುವರು; ಶಕುಂತಲೆಯು ಗೌತಮಿಯ ಹಿಂದೆ ಹೊರಡುವಳು; ದುಷ್ಯಂತನು ಯಾಗಕಾರ್ಯವನ್ನು ಪೂರೈಸುವುದಕ್ಕಾಗಿ ಯಜ್ಞಶಾಲೆಗೆ ಹೊರಟು, ಅದನ್ನು ಸಾಂಗವಾಗಿ ನೆರವೇರಿಸಿ ಋಷಿಗಳ ಅನುಜ್ಞೆಯನ್ನು ಪಡೆದು, ತನ್ನ ರಾಜಧಾನಿಗೆ ಹೊರಡುವನು. ಈ ಸಂವಿಧಾನಕ್ರಮದಲ್ಲಿ ಅನುಚಿತವೆಂದು ತೋರುವ ಒಂದು ಅಂಶವಾದರೂ ಇಲ್ಲ. ಪ್ರತಿಯೊಂದು ಅಂಶವೂ ಕಥೆಯ ಸೊಬಗನ್ನು ವೃದ್ಧಿಪಡಿಸುವುದು.

ಮಹಾಭಾರತದ ಕಥೆಯಲ್ಲಿ ಅಂಗುಲೀಯಕದ ಪ್ರಸಕ್ತಿಯೇ ಕಂಡುಬರುವುದಿಲ್ಲ. ಆದರೆ ನಾಟಕದಲ್ಲಿ ಇದು ಪ್ರಸಕ್ತವಾಗಿರುವುದು. ಪ್ರಿಯಪ್ರೇಯಸಿಗಳು ಅಗಲುವುದಕ್ಕೆ ಮುಂಚೆ ರಾಜನು ತನ್ನ ನಾಮಾಂ

ಕಿತವಾದ ಮುದ್ರಿಕೆಯನ್ನು ತನ್ನ ಪ್ರಿಯಳಿಗೆ ಜ್ಞಾಪಕಾರ್ಥವಾಗಿ ಕೊಟ್ಟು ಹೊರಡುವನು. ಇದು ಬಹಳ ಸಹಜವಾಗಿ ತೋರುವುದು. ಈ ಮುದ್ರಿಕೆಯು ನಾಟಕದ ಸಂವಿಧಾನಕ್ಕೆ ಬಹಳ ಉಪಕಾರಕವಾಗಿರುವುದು. ಕವಿಯು ಕಥೆಯ ಭಾಗಗಳನ್ನು ಬಹಳ ಮುದ್ದಾಗಿ ಜೋಡಿಸಿರುವನು. ತನ್ನ ಸಂಕೇತಕ್ಕೆ ಅನುಸಾರವಾಗಿಯೇ ಗಿಡಗಳಿಗೆ ಎರಡು ಸಲ ನೀರೆರೆಯುವ "ಸಾಲ"ವನ್ನು ಹೊತ್ತಿದ್ದ ಶಕುಂತಲೆಯನ್ನು ಬಿಡಿಸುವುದಕ್ಕಾಗಿ, ದುಷ್ಯಂತನು ಸಖಿಯರಿಗೆ ಕೊಟ್ಟು, ಸಾಲತೀರಿಸಲು ಪ್ರಯತ್ನಿಸಿದ್ದುದು ಈ ಮುದ್ರಿಕೆಯಿಂದಲೇ. ಇದು ಶಕ್ರತೀರ್ಥದಲ್ಲಿ ಬಿದ್ದುಹೋಗಿದ್ದುದರಿಂದಲೇ ದೂರ್ವಾಸಶಾಪವೂ ಫಲಿಸಿದುದು; ಇದು ದೊರೆತು ರಾಜನಿಗೆ ಗೋಚರವಾದುದರಿಂದಲೇ ಶಾಪವು ಹೋಗಿ ಶಕುಂತಲೆಯ ಜ್ಞಾಪಕ ವುಂಟಾಗಿ ಆತನು ತನ್ನ ಅನಾದರಣಕ್ಕಾಗಿ ಅಷ್ಟೊಂದು ವ್ಯಥೆಪಡುವಂತೆ ಆಗಿದ್ದುದು. ಹೀಗೆ ಸಾಧಾರಣವಾದ ಒಂದು ಮುದ್ರಿಕೆಯಿಂದ ಕಥಾ ಸಂವಿಧಾನಕ್ಕೆ ಇಷ್ಟೊಂದು ಉಪಕಾರ ಮಾಡಿಸಿರುವುದು, ಕವಿಯ ಅಪೂರ್ವ ಸಂವಿಧಾನಕೌಶಲವನ್ನು ತೋರಿಸುವುದು.

ದೂರ್ವಾಸ ಶಾಪವೃತ್ತಾಂತವು ಕಾಳಿದಾಸನ ಮಾರ್ಪಾಡುಗಳಲ್ಲಿ ಬಹಳ ಮುಖ್ಯವಾದುದೆಂದು ಹೇಳಬಹುದು. ಇದರಿಂದ ಮುಖ್ಯವಾಗಿ ಭಾರತದಲ್ಲಿ ಕಂಡುಬರುವ ದುಷ್ಯಂತನ ಅಸತ್ಯ, ಕಪಟ, ನಿಷ್ಕರುಣ ಮೊದಲಾದ ದುರ್ಗುಣಗಳು ನಾಶವಾಗಿರುವುವು. ಈ ಪ್ರಸಕ್ತಿಯಿಂದ ದುಷ್ಯಂತನು ತನ್ನ ಪತ್ನಿಯನ್ನು ಮರೆತಿದ್ದುದು ಶಾಪ ಮಾಹಾತ್ಮ್ಯದಿಂದಲೇ ಹೊರತು ಬುದ್ಧಿಪೂರ್ವಕವಾಗಿ ಅಲ್ಲವೆಂದು ಪಾಠಕ ಪ್ರೇಕ್ಷಕ ವರ್ಗಕ್ಕೆ ಸ್ಪಷ್ಟಪಡುವುದು. ಶಕುಂತಲೆಯು ತನ್ನನ್ನು ಪ್ರಾಣನಾಥನು ಆಶ್ರಮದಲ್ಲಿಯೇ ಬಿಟ್ಟು ರಾಜಧಾನಿಗೆ ಹಿಂದಿರುಗಿದುದಕ್ಕಾಗಿ ವಿರಹ ದುಃಖಾರ್ಣವಮಗ್ನಳಾಗುವುದೂ, ಅದೇ ಕಾಲದಲ್ಲಿಯೇ ಶೀಘ್ರಕೋಪಿಗಳಾದ ದೂರ್ವಾಸರು ಆ ತಪೋವನಕ್ಕೆ ಬರುವುದೂ, ಅಲ್ಲಿ ತಮಗೆ ತಕ್ಕ ಅತಿಥಿಸತ್ಕಾರವನ್ನು ಮಾಡದಿದ್ದುದಕ್ಕಾಗಿ ಆಕೆಗೆ ಶಾಪಕೊಡುವುದೂ ಎಷ್ಟೋ ಸ್ವಾಭಾವಿಕವಾಗಿ ತೋರುವುವು. ಇದರಿಂದ ಕರ್ತವ್ಯ ಕಾರ್ಯದಲ್ಲಿ ಎಂತಹ ಆಪತ್ಕಾಲದಲ್ಲಾದರೂ ಆಸಕ್ತಿಯು ಇದ್ದೇತೀರ

ಬೇಕೆಂದೂ ಇಲ್ಲದಿದ್ದರೆ ದುಷ್ಪರಿಣಾಮವು ತಪ್ಪಲಾರದೆಂದೂ ಒಂದು ನೀತಿಯು ಅಪ್ರತ್ಯಕ್ಷವಾಗಿ ಬೋಧಿತವಾಗಿರುವಂತೆ ಕಂಡುಬರುತ್ತಿರುವುದು. ಈ ಶಾಪವೊಂದನ್ನೇ ನಿರ್ಮಿಸಿದ್ದರೆ ಕಾಳಿದಾಸನು ಕೃತಕೃತ್ಯನಾಗುತ್ತಿರಲಿಲ್ಲ. ಅದರ ವಿಮೋಚನಮಾರ್ಗವನ್ನೂ ಬಹಳ ಮನೋಹರವಾಗಿ ಕಲ್ಪಿಸಿರುವನು. ಅದು ಅಭಿಜ್ಞಾನಕ್ಕಾಗಿ ಕೊಟ್ಟಿದ್ದ ವಸ್ತುವಿನ (ಉಂಗುರದ) ದರ್ಶನದಿಂದ ಪರಿಹಾರವಾಗುವುದೆಂದು ಕಲ್ಪಿಸಿ, ತೀರ್ಥಸೇವನೆಯ ಕಾಲದಲ್ಲಿ ಉಂಗುರವು ನೀರಿನಲ್ಲಿ ಬೀಳುವಂತೆಯೂ, ಅದನ್ನು ಒಂದು ಕೆಂಪುಮೀನು ನುಂಗುವಂತೆಯೂ, ಆ ಉಂಗುರವು ಬೆಸ್ತನ ಕೈಗೆ ದೊರೆತು ಕಡೆಗೆ ರಾಜನ ದೃಷ್ಟಿಗೆ ಬಂದು ಆ ಮೂಲಕ ದೊರೆಯ ವಿಸ್ಮೃತಿಯು ತೊಲಗುವಂತೆಯೂ ನಿರ್ಮಿಸಿರುವ ಸಂವಿಧಾನವು ಬಹಳ ಸಹಜವಾಗಿಯೂ ಸುಂದರವಾಗಿಯೂ ಇರುವುದು. ಈ ಶಾಪವು ಪ್ರಾಪ್ತವಾದ ಸಂದರ್ಭದಲ್ಲೇ ಶಕುಂತಲೆಯ ಸಖಿಯರ ಸ್ನೇಹವು ಎಷ್ಟು ನಿಷ್ಕಲ್ಮಷವಾದುದೆಂದೂ, ಅವರು ತಮ್ಮ ಸಖಿಯ ಮನಸ್ಸನ್ನು ಕಿಂಚಿನ್ಮಾತ್ರವೂ ನೋಯಿಸಲು ಹಿಂದೆಗೆಯುತ್ತ ಹೇಗೆ ನಡೆದುಕೊಳ್ಳುತ್ತಿದ್ದರೆಂದೂ ಚೆನ್ನಾಗಿ ಕಂಡುಬರುವುದು. ಈ ಶಾಪವೃತ್ತಾಂತದಿಂದ ಮತ್ತೊಂದು ಪ್ರಯೋಜನವಾಗಿರುವುದು. ಮಹಾಭಾರತದ ಕಥೆಯಲ್ಲಿ ಶೃಂಗಾರರಸಕ್ಕೆ ಪ್ರಾಧಾನ್ಯವಿಲ್ಲ; ಕರುಣಾರಸಕ್ಕೇ ಹೆಚ್ಚು ಪ್ರಾಶಸ್ತ್ಯವಿರುವುದು. ನಾಟಕದಲ್ಲಾದರೋ ಈ ಶಾಪ ಮಾಹಾತ್ಮ್ಯದಿಂದಲೇ ದುಷ್ಯಂತನಿಗೆ ವಿಸ್ಮೃತಿಯುಂಟಾಗಿರುವುದೆಂಬುದನ್ನು ಪ್ರೇಕ್ಷಕ ವಾಚಕವರ್ಗದ ಮುಂದಿಟ್ಟು, ಶಕುಂತಲೆಯ ವಿಷಯದಲ್ಲಿಯೂ ಅನುತಾಪವುಂಟಾಗಿ ಪ್ರಿಯಪ್ರೇಯಸಿಯರ ವಿಪ್ರಲಂಭದಿಂದ ಶೃಂಗಾರರಸಕ್ಕೇ ಸ್ವಲ್ಪ ಪುಷ್ಟಿಗೆ ಸಹಾಯವಾದಂತಾಗಿರುವುದು. ಹೀಗೆ ಒಂದು ಮಾರ್ಪಾಡಿನಿಂದ ಬಹು ಪ್ರಯೋಜನಗಳು ಆಗುವಂತೆ ನಿರ್ಮಿಸುವುದು ಕಾಳಿದಾಸನಂತಹ ಕವಿಸಾರ್ವಭೌಮನಿಗೇ ಸಾಧ್ಯ. ಐದನೆಯ ಅಂಕದಲ್ಲಿ ಕಂಡುಬರುವ ಹಂಸಪದಿಕೆಯ ಗಾನಾಭ್ಯಾಸವೂ ಒಂದುಕಡೆ, ದೂರ್ವಾಸನು ಹರ್ಷಿಗಳ ಶಾಪವು ಎಷ್ಟು ಅಮೋಘವಾದುದೆಂದೂ ಮತ್ತೊಂದು ಕಡೆ, ದುಷ್ಯಂತನ ವಿಸ್ಮೃತಿಯು ಶಾಪಮಾಹಾತ್ಮ್ಯಜನ್ಯವಾದುದರಿಂದ ನಿಷ್ಕಪಟವಾದುದೆಂಬುದನ್ನೂ ಗಾಢವಾದುದೆಂಬುದನ್ನೂ ಸ್ಪಷ್ಟಪಡಿಸುವುದು.

ಶಕುಂತಲೆಯು ರಾಜನ ಆಸ್ಥಾನಕ್ಕೆ ಬಂದಾಗ ದುಷ್ಯಂತನು ನಡೆದುಕೊಂಡ ರೀತಿಯಲ್ಲೂ ಎರಡು ಕಥೆಗಳಿಗೆ ಅಜಗಜಾಂತರವಿರುವುದು. ಮಹಾಭಾರತದ ಕಥೆಯಮೇರೆಗೆ ದುಷ್ಯಂತನು ತನ್ನ ಪ್ರಿಯೆಯನ್ನು ರಾಜಧಾನಿಗೆ ಕರೆಯಿಸಿಕೊಳ್ಳುವುದಾಗಿ ಪುನಃ ಪುನಃ ನಂಬಿಸಿ ಬಂದಿದ್ದರೂ, ಆಕೆಯನ್ನು ಉಪೇಕ್ಷಿಸಿ ಬಿಟ್ಟು ಇದ್ದುದಕ್ಕೆ ಪ್ರಜಾಪವಾದ ಭೀತಿಯೇ ಕಾರಣವೆಂದು ಸ್ಪಷ್ಟವಾಗಿ ಗೊತ್ತಾಗುವುದು. ಆದರೆ ನಾಯಕನು ನಾಯಕಿಯನ್ನು ನೋಡಿದಕೂಡಲೇ ಮೋಹಿಸಿದುದೂ, ಆಕೆಯನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕಾಗಿ ಆಕೆಗೆ ತನ್ನ ರಾಜ್ಯವನ್ನೂ ಸಹ ಕೊಡಲು ವಾಗ್ದಾನಮಾಡುವುದೂ, ಇವೆಲ್ಲಕ್ಕೂ ಭಾರತದ ದುಷ್ಯಂತನ ಕಾಮಪರವಶತೆಯು ಮುಖ್ಯ ಕಾರಣವೆಂದು ಧ್ವನಿ ತೋರಿಬರುತ್ತಿರುವುದು. ಇಂತಹನಿಗೆ ಅಂತಃಪುರವು ಸಮೀಪದಲ್ಲಿರುವಾಗ ದೂರಸ್ಥಳಾಗಿದ್ದ ಶಕುಂತಲೆಯು, ಅದರಲ್ಲೂ, ಯೌವರಾಜ್ಯಪಟ್ಟಾಭಿಷೇಕ ವಿಷಯಕವಾಗಿ ವಾಗ್ದಾನವನ್ನು ಪಡೆದುಕೊಂಡಿದ್ದ ಆಕೆಯ ವಿಷಯದಲ್ಲಿ ಅನಾದರಣೆಯು ಕಂಡುಬಂದುದಕ್ಕೆ ಅಂತಃಪುರಸ್ತ್ರೀಯರ ಭಯವೂ ಲೋಭವೂ ಕಾರಣಗಳಾಗಿದ್ದರೂ ಆಗಿರಬಹುದೆಂದು ಕಾಣುವುದು. ಸಾಲದುದಕ್ಕೆ ದುಷ್ಯಂತನು ಶಕುಂತಲೆಯ ಮಾತಾಪಿತೃಗಳನ್ನೂ ದೂಷಿಸಿರುವಂತೆ ಭಾರತದ ಕಥೆಯಲ್ಲಿ ವರ್ಣನೆಯಿರುವುದನ್ನು ನೋಡಿದರೆ, ದುಷ್ಯಂತನ ವಿಷಯದಲ್ಲಿ ಪಾಠಕ ಪ್ರೇಕ್ಷಕರಿಗೆ ಸ್ವಲ್ಪಮಟ್ಟಿಗೆ ಕೋಪವೂ ಉಂಟಾಗುವುದು. ಅವನ ಅನಾದರಣೆಗೆ ಕಾರಣವು ಪ್ರಜಾಪವಾದ ಭಯವೇ ಆಗಿರಲಿ, ಅಂತಃಪುರ ಜನರ ಹೆದರಿಕೆಯೇ ಆಗಿರಲಿ, ಶಕುಂತಲೆಯ ವಿಷಯಕವಾದ ಜುಗುಪ್ಸೆಯೇ ಆಗಿರಲಿ, ಅಥವಾ ರಾಜ್ಯಲೋಭವೇ ಆಗಿರಲಿ, ಭಾರತದ ದುಷ್ಯಂತನ ಗುಣಕ್ಕೆ ಸ್ವಲ್ಪವೂ ಕಳೆಯೇರುವಂತೆ ಇಲ್ಲ. ನಾಟಕದ ಕಥೆಯಲ್ಲಾದರೋ ದುಷ್ಯಂತನ ಅನಾದರಣಕ್ಕೆ ಅವನು ಎಷ್ಟು ಮಾತ್ರಕ್ಕೂ ಕಾರಣನಲ್ಲವೆಂದು ತೋರಿಬರುವುವುದಲ್ಲದೆ, ಶಕುಂತಲೆಯ ಸ್ಮೃತಿಯುಂಟಾದ ಕೂಡಲೇ ಆತನು ಅನುಭವಿಸಿದ ಪಶ್ಚಾತ್ತಾಪವನ್ನೂ ವಿರಹವೇದನೆಯನ್ನೂ ನೋಡಿ ಎಂತಹ ಕಲ್ಲೆದೆಯ ವಿಮರ್ಶಕನಿಗಾದರೂ ಮನಸ್ಸು ಕರಗುವಂತಿರುವುದು.

ಆದುದರಿಂದ ಆಸ್ಥಾನಕ್ಕೆ ಶಕುಂತಲೆಯು ಬಂದಾಗ ತೋರಿಸಿದ ನಡ
ವಳಿಕೆಯ ವಿಷಯದಲ್ಲಿ ನಾಟಕದ ದುಷ್ಯಂತನು ಭಾರತದ ದುಷ್ಯಂತನಿ
ಗಿಂತ ಬಹಳ ಭಿನ್ನನಾಗಿರುವನು. ಆಸ್ಥಾನಕ್ಕೆ ಬಂದ ನಾಯಕಿಯ
ವಿಷಯದಲ್ಲೂ ಎರಡು ಕಥೆಗಳಿಗೂ ಭೇದವು ತೋರಿಬರುವುದು.
ಭಾರತದ ಕಥೆಯಲ್ಲಿ, ನಾಯಕಿಯು ಆಸ್ಥಾನಕ್ಕೆ ಬಂದು ಯೌವರಾಜ್ಯ
ಪಟ್ಟಾಭಿಷೇಕ ನಿಬಂಧನೆಯನ್ನು ಮುಖ್ಯವಾಗಿ ಎತ್ತಿಹೇಳಿ ಹಿಂದಣ
ಕೆಲವು ಗುರುತುಗಳನ್ನು ತಿಳಿಸುವಳು. ಎಷ್ಟು ಬಗೆಯಲ್ಲಿ ಬೋಧಿಸಿದರೂ
ಪ್ರಯೋಜನವಾಗದಿರಲು, ಆಸ್ಥಾನವನ್ನು ಬಿಟ್ಟು ಹೊರಟುಹೋಗುವ
ಸಂದರ್ಭದಲ್ಲೂ "ಆದರೆ ನಿನ್ನ ಬಳಿಕ ಈ ಬಾಲಕನೇ ರಾಜ್ಯಕ್ಕೆ ಚಕ್ರ
ವರ್ತಿಯಾಗುವನೆಂಬುದನ್ನು ತಿಳಿದಿರು" ಎಂದು ಹೇಳುತ್ತ ಹೊರಡು
ವಳು. ನಾಟಕದ ಶಕುಂತಲೆಯಲ್ಲಿ ಇಂತಹ ಲೋಭವು ತೋರಿಬರುವು
ದಿಲ್ಲ. ನಿರಪರಾಧಿಯಾದ ತಾನು, ಮೋಸಮಾಡಬೇಕೆಂದು ಸುಮ್ಮ
ಸುಮ್ಮನೆ ರಾಜಪತ್ನಿಯಂತೆ ನಟಿಸುತ್ತ ಸುಳ್ಳುಹೇಳುತ್ತಿರುವುದಾಗಿ
ರಾಜನು ಸಂಶಯಪಟ್ಟಾಗ ಮಾತ್ರ, ಆತನನ್ನು "ಅನಾರ್ಯ"ನೆಂದೂ,
"ಬಾಯಲ್ಲಿ ಮಧುವನ್ನೂ ಹೃದಯದಲ್ಲಿ ವಿಷವನ್ನೂ ಧರಿಸಿದವ"
ನೆಂದೂ, "ಧೂರ್ತ"ನೆಂದೂ ಹೇಳಿರುವಳು. ಈಕೆಯ ನಿಷ್ಠುರೋಕ್ತಿಗೆ
ಆಕೆಯ ನಿರಪರಾಧಿತ್ವವೂ, ನಿರಪರಾಧಿಯಾಗಿದ್ದರೂ ತನ್ನ ಮೇಲೆ
ಆರೋಪಿಸುತ್ತಿದ್ದ ಅಪವಾದಕ್ಕಾಗಿ ಸಹಜವಾದ ಕೋಪವೂ ಮುಖ್ಯ
ಕಾರಣವೆಂದು ಎಲ್ಲರಿಗೂ ಗೊತ್ತಾಗುವಂತಿರುವುದು. ಹೀಗೆ ನಾಯಿಕಾ
ನಾಯಕರು ಆಸ್ಥಾನದಲ್ಲಿ ಸಂಧಿಸಿದಾಗ ಅವರ ಆಚರಣೆಯ ವಿಷಯ
ದಲ್ಲೂ ಭೇದಗಳು ತೋರಿಬರುವುವು.

ಭಾರತದ ಕಥೆಯ ಮೇರೆಗೆ ಶಕುಂತಲೆಯು ದುಷ್ಯಂತನ ಆಸ್ಥಾ
ನಕ್ಕೆ ಬರುವಾಗಲೇ ತನ್ನ ಆರು ವರುಷದ ಮಗನನ್ನು ಕರೆದುಕೊಂಡು
ಬಂದಿದ್ದಂತೆ ಕಂಡುಬರುವುದು. ಇಷ್ಟು ದೀರ್ಘಕಾಲ ಕಣ್ವಾಶ್ರಮ
ದಲ್ಲಿಯೇ ಆಕೆ ನಿಂತಿದ್ದುದು ಶಕುಂತಲೆಗೂ ಭೂಷಣವಲ್ಲ; ಅಷ್ಟು
ದಿನಗಳವರೆಗೂ ಆಕೆಯನ್ನು ತಮ್ಮ ಬಳಿಯಲ್ಲಿಯೇ ಉಳಿಸಿಕೊಂಡಿ
ದ್ದುದು ಕಣ್ವರಿಗೂ ಯುಕ್ತವಾಗಿ ತೋರುವುದಿಲ್ಲ. ನಾಟಕದಲ್ಲಾದರೋ

ಶಕುಂತಲೆಗೆ ಸಂಭವಿಸುತ್ತಿದ್ದ ಬಾಧೆಯನ್ನು ಶಾಂತಪಡಿಸಲು ಶಕ್ರ ತೀರ್ಥಕ್ಕೆ ಹೋಗಿದ್ದ ಕಣ್ವರು ಆರೇಳು ದಿನಗಳಲ್ಲಿ ಕೂಡಲೆ ಹಿಂದಿರುಗಿ ಆಶ್ರಮಕ್ಕೆ ಬಂದು ಶಕುಂತಲೆಗೆ ತಮ್ಮ ತಂಗಿಯನ್ನು ಜೊತೆಮಾಡಿ, ಶಾರ್ಙ್ಗರವ ಶಾರದ್ವತರನ್ನು ಬೆಂಗಾವಲಿಗೆ ಕಳುಹಿಸಿ ಆಕೆಗೆ ಬುದ್ಧಿವಾದ ವನ್ನು ಹೇಳಿ, ಸಾಧಾರಣ ಗೃಹಸ್ಥಾಶ್ರಮಿಗಳಂತೆ ವ್ಯಸನಪಡುತ್ತ ತಮ್ಮ ಪಾಲಿತಪುತ್ರಿಯನ್ನು ಕಳುಹಿಸಿಕೊಟ್ಟಿರುವರು. ಈ ಕಾಲದಲ್ಲಿ ಶಕುಂತ ಲೆಯು ಅಂತರ್ವತ್ನಿಯಾಗಿದ್ದಳು. ಆರುವರುಷದ ಹುಡುಗನನ್ನು ಕರೆದು ಕೊಂಡು ಹೋಗಿದ್ದಾಗ ಆ ಬಾಲಕನ ಚಕ್ರವರ್ತಿ ಲಕ್ಷಣಾದಿಗಳನ್ನು ನೋಡಿ ತನ್ನ ಮಗನೇ ಎಂದು ರಾಜನು ಗೊತ್ತುಮಾಡಿಕೊಳ್ಳಬಹುದಾಗಿ ದ್ದಿತ್ತು; ಸದಸ್ಯರಾದರೂ ದುಷ್ಯಂತನ ಮತ್ತು ಆ ಬಾಲಕನ ಆಕಾರ ಸಾದೃಶ್ಯದಿಂದ ಅವರು ತಂದೆ ಮಕ್ಕಳೆಂದು ನಿರ್ಧರಿಸಬಹುದಾಗಿದ್ದಿತ್ತು. ಇಂತಹದರಲ್ಲಿಯೂ ರಾಜನು ಶಕುಂತಲೆಯನ್ನೂ ಸರ್ವದಮನನನ್ನೂ ನಿರಾಕರಿಸಿರುವುದು ಅಸಾಧುವೆಂದೂ ಅಸಂಗತವೆಂದೂ ಭಾರತದ ಕಥೆ ಯಲ್ಲಿ ಕಂಡುಬರುವುದು. ಹಿಂದೆಯೇ ಹೇಳಿದಂತೆ ಸರ್ವದಮನನಿಗೆ ಆರು ವರುಷಗಳಾಗುವ ವರೆಗೂ ಪತಿಗೃಹದ ಕಡೆಗೆ ಗಮನವೇ ಬೀಳ ದಿದ್ದುದು ಶಕುಂತಲೆಯ ಅನುರಾಗರಾಹಿತ್ಯವನ್ನು ಎತ್ತಿ ತೋರಿಸಲು ಸಹಕಾರಿಯಾಗಿದೆ. ಕಾಳಿದಾಸನು ಏರ್ಪಡಿಸಿರುವ ಮಾರ್ಪಾಡಿನಿಂದ ಅನೇಕ ಪ್ರಯೋಜನಗಳುಂಟಾಗಿವೆ. ಅಂತರ್ವತ್ನಿಯಾಗಿದ್ದಾಗಲೇ ಶಕುಂತಲೆಯು ರಾಜನ ಬಳಿಗೆ ಬಂದುದರಿಂದ ಆಕೆಯ ಗಾಢಾನುರಾ ಗವೂ ಕಣ್ವರ ಉಚಿತಜ್ಞತೆಯೂ ಚೆನ್ನಾಗಿ ಕಂಡುಬರುವುದಲ್ಲದೆ, ಸರ್ವ ದಮನನ ಸ್ವಚ್ಛಂದವಾದ ಬಾಲ ಲೀಲೆಗಳನ್ನು ತಂದೆಯು ನೋಡಲು ಅವಕಾಶವು ದೊರೆತಿರುವುದು.

ಶಕುಂತಲೆಯು ಪುರೋಹಿತನ ಹಿಂದೆ ಹೋಗುತ್ತಿದ್ದಾಗ ಅದೃಶ್ಯ ಳಾದ ವೃತ್ತಾಂತವೂ ಬಹಳ ಚಮತ್ಕಾರವಾಗಿರುವುದಲ್ಲದೆ ಉಚಿತವಾ ಗಿಯೂ ಇರುವುದು. ಒಂದು ಕಡೆ ಶಾಪದೋಷದಿಂದ ದುಷ್ಯಂತನು ಶಕುಂತಲೆಯನ್ನು ನಿರಾಕರಿಸಿದನು; ಮತ್ತೊಂದು ಕಡೆ, ಶಾರ್ಙ್ಗರವನು ಆಕೆಯನ್ನು ಕುರಿತು "ದೋಷಮಾತ್ರದರ್ಶಿಯೇ! ಇದೇನು! (ಇಷ್ಟು)

ಸ್ವಾತಂತ್ರ್ಯವನ್ನು ಅವಲಂಬಿಸುತ್ತಿರುವೆ?" ಎಂದು ಗದರಿಸಿ, ತಳ್ಳಿದನು. ಈ ಮಧ್ಯದಲ್ಲಿ ಶಕುಂತಲೆಗೆ ಗತಿಯೇನು? ರಾಜಪುರೋಹಿತನೇನೋ ಪ್ರಸವವಾಗುವ ವರೆಗೂ ಆಕೆಯು ತನ್ನ ಮನೆಯಲ್ಲಿ ಇರಬಹುದೆಂದು ಸೂಚಿಸಿದನು. ಅಪ್ಸರಸ್ತ್ರೀಯಾದ ಮೇನಕೆಯ ಮತ್ತು ವಿಶ್ವಾಮಿತ್ರ ಋಷಿಯ ಔರಸಪುತ್ರಿಯೂ, ಕಣ್ವರ ಪಾಲಿತಪುತ್ರಿಯೂ, ದುಷ್ಯಂತನಿಂದ ಮನಃಪೂರ್ವಕವಾಗಿ ಗೃಹೀತಳಾದ ಪತ್ನಿಯೂ ಆದ ಶಕುಂತಲೆಯು ಗತ್ಯಂತರವಿಲ್ಲದೆ ಪುರೋಹಿತನ ಮನೆಯಲ್ಲಿ ವಾಸಮಾಡಿಕೊಂಡಿರುವು ದೆಂದರೆ ಅತ್ಯಂತ ಅನುಚಿತವೂ ಶೋಚನೀಯವೂ ಆದ ಸಂಗತಿಯೆಂದು ಕಂಡುಬರುವುದು. ಆದುದರಿಂದ ಇಂತಹ ಅನುಚಿತವಾದ ಸಂವಿಧಾನ ವನ್ನು ನಮ್ಮ ಕವಿಕುಲ ಲಲಾಮನು ಬಹಳ ಚಮತ್ಕಾರವಾಗಿ ಮಾರ್ಪ ಡಿಸಿರುವನು. ಚಿಕ್ಕ ಮಗುವಾಗಿದ್ದಾಗಲೇ ಶಕುಂತಲೆಯನ್ನು ಪರಿತ್ಯಜಿಸಿ ಹೊರಟುಹೋದ ಮೇನಕೆಯ ಗುಣಕ್ಕೆ ಮಹಾಭಾರತದ ಕಥೆಯಲ್ಲಿ ಬಣ್ಣವೇರಲು ಅವಕಾಶವೇ ಇರುವುದಿಲ್ಲ. ನಾಟಕದ ಕಥೆಯ ಮೇರೆಗೆ, ವಿಷಮ ಸ್ಥಿತಿಯಲ್ಲಿದ್ದ ಶಕುಂತಲೆಯನ್ನು ಕರೆದುಕೊಂಡು ಹೋದುದ ರಿಂದ ಮೇನಕೆಯು ತನ್ನ ಪೂರ್ವದ (ಶಿಶುಪರಿತ್ಯಾಗ ರೂಪವಾದ) ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಂಡಿರುವಂತೆ ಕಂಡುಬರುವುದು. ಆ ಬಳಿಕ ಶಕುಂತಲೆಯು ಮಾರೀಚಾಶ್ರಮದಲ್ಲಿ ವಾಸಮಾಡಿಕೊಂಡಿದ್ದ ಳೆಂಬ ಸಂವಿಧಾನಕ್ರಮವೂ ಬಹಳ ಉಚಿತವಾಗಿಯೇ ಇರುವುದು. ಸ್ವರ್ಗಲೋಕದ ಮೇನಕೆಗೂ ಮರ್ತ್ಯಲೋಕದ ವಿಶ್ವಾಮಿತ್ರನಿಗೂ ಜನಿಸಿದ್ದ ಶಕುಂತಲೆಯು ಸ್ವರ್ಗ ಮರ್ತ್ಯಗಳಿಗೆ ಮಧ್ಯದಲ್ಲಿರುವ ಮಾರೀಚ ಬ್ರಹ್ಮನ ಆಶ್ರಮದಲ್ಲಿ ಕೆಲವು ಕಾಲ ವಾಸಮಾಡಿಕೊಂಡಿದ್ದು, ಅಲ್ಲಿ ಭರತಖಂಡಕ್ಕೆ ಸಾರ್ವಭೌಮ ಲಲಾಮನಾದ ಸರ್ವದಮನ (ಭರತ) ನನ್ನು ಪ್ರಸವಿಸಿದಳೆಂದೂ ಕಲ್ಪಿಸಿರುವುದು ಅತ್ಯಂತ ರಮಣೀಯವಾ ಗಿಯೂ ಉಚಿತವಾಗಿಯೂ ಇರುವುದು. ಭೂಲೋಕದಲ್ಲಿ ಆಳಿಕೊಂಡಿದ್ದ ದುಷ್ಯಂತನಿಂದ ನಾಯಿಕೆಯನ್ನು ಅಗಲಿಸಿ ಸ್ವರ್ಗಮರ್ತ್ಯಗಳಿಗೆ ಮಧ್ಯ ದಲ್ಲಿದ್ದ ಮಾರೀಚಾಶ್ರಮಕ್ಕೆ ಸೇರಿಸಿಬಿಟ್ಟಮೇಲೆ ಇವರವರಿಗೆ ಪುನಸ್ಸಂ ಘಟನೆಯಾಗಬೇಕಷ್ಟೆ! ಇದಕ್ಕಾಗಿಯೇ ಕಾಳಿದಾಸನು ಒಂದು ಚಮ

ತ್ಕಾರವಾದ ಉಪಾಯವನ್ನು ಮಾಡಿರುವನು. ಇಂದ್ರನಿಗೆ ಕಾಲನೇಮಿ ಪುತ್ರರಿಂದ ಒದಗಿದ್ದ ಬಾಧೆಯನ್ನು ತಪ್ಪಿಸುವುದಕ್ಕಾಗಿ ಮಾತಲಿಯನ್ನು ಕಳುಹಿಸಿ ಆತನನ್ನು ಇಂದ್ರಲೋಕಕ್ಕೆ ಕರೆಯಿಸಿಕೊಂಡಂತೆ ಸಂವಿಧಾನ ವನ್ನು ಕವಿಯು ನಿರ್ಮಿಸಿರುವನು. ಈ ಒಂದು ಸಂಗತಿಯಿಂದ ನಾಯ ಕನ ಗುಣಕ್ಕೆ ಅತ್ಯುತ್ಕರ್ಷವುಂಟಾಗಿರುವುದು. ಶಕುಂತಲೆಯನ್ನು ನಿರಾ ಕರಿಸಿದುದಕ್ಕಾಗಿ ವ್ಯಥೆಪಡುತ್ತ ಅನ್ಯಮನಸ್ಕನಾಗಿದ್ದಾಗ ಮೇಘಚ್ಛಂದ ವೆಂಬ ಉಪ್ಪರಿಗೆಯಿಂದ ಕೇಳಿಬಂದ ಮಾಢವ್ಯನ ಆರ್ತಧ್ವನಿಯನ್ನು ಕೇಳಿದಕೂಡಲೇ ತನ್ನ ದುಃಖವನ್ನು ಒತ್ತಟ್ಟಿಗೆ ತಳ್ಳಿ ಅವನನ್ನು ಬಿಡಿಸಿ ಕೊಳ್ಳಲು ಹೋದನೆಂದು ಹೇಳಿ ಕವಿಯು ತನ್ನ ನಾಯಕನ ಅಸ್ವಾರ್ಥತೆ ಯನ್ನೂ ಆರ್ತರಕ್ಷಣಪರಾಯಣತೆಯನ್ನೂ ವ್ಯಕ್ತಪಡಿಸಿರುವನು. ಸ್ವರ್ಗಾಧಿಪತಿಯಾದ ಇಂದ್ರನೂ ದುಷ್ಯಂತನನ್ನು ತನ್ನ ಸಹಾಯಕ್ಕಾಗಿ ಕರೆಯಿಸಿಕೊಳ್ಳುತ್ತಿದ್ದನೆಂದು ಸೂಚಿಸುವುದರ ಮೂಲಕ ಕಾಳಿದಾಸನು ತನ್ನ ನಾಯಕನ ಶೌರ್ಯ ಸಾಹಸಾದಿ ಗುಣಗಳಿಗೆ ಆಶ್ಚರ್ಯಾವಹವಾದ ಪ್ರಕಾಶವನ್ನುಂಟುಮಾಡಿರುವನು.

ನಾಯಿಕಾ ನಾಯಕರನ್ನು ಪುನಃ ಒಟ್ಟುಗೂಡಿಸಲು ಕವಿಯು ಮಾಡಿರುವ ಏರ್ಪಾಡೂ ಬಹಳ ಮನೋಹರವಾಗಿಯೇ ಇರುವುದು. ಭಾರತದ ಕಥೆಯ ಮೇರೆಗೆ ಶಕುಂತಲೆಯು ಕುಪಿತಳಾಗಿ ಹೊರಟು ಹೋಗುತ್ತಿದ್ದಾಗ, ಆಕಾಶವಾಣಿಯು ಕೇಳಿಬಂದ ಬಳಿಕ, ದುಷ್ಯಂತನು ಶಕುಂತಲೆಯನ್ನೂ ಸರ್ವದಮನನನ್ನೂ ಪರಿಗ್ರಹಿಸಿದನೆಂದು ಕಂಡು ಬರುವುದು. ಆ ಕಥೆಯಲ್ಲಿ ಗಂಡಹೆಂಡಿರಿಗೆ ಅನುರಾಗವು ಹೆಚ್ಚಾಗಿ ವೃದ್ಧಿಯಾಗಿದ್ದ ಅಂಶವೇ ಕಂಡುಬರುವುದಿಲ್ಲ. ಅನುರಾಗವು ಅಲ್ಲಿ ಸ್ವಲ್ಪವಾಗಿ ಕಂಡುಬಂದರೂ ದುಷ್ಯಂತನ ಪಕ್ಷವಾಗಿ ಕಂಡುಬರುವುದೇ ಸ್ವಲ್ಪ ಹೆಚ್ಚೆಂದು ತೋರುವುದು; ಇದೂ ಕಾಮಾಭಿಲಾಷೆ, ಸ್ವಾರ್ಥ ಪರತೆಗಳಿಂದ ಕಲುಷಿತವಾಗಿರುವುದು. ಶಕುಂತಲೆಯ ಅನುರಾಗ ಲೇಶವೂ ಸಹ ಯೌವರಾಜ್ಯಪಟ್ಟಾಭಿಷೇಕವೆಂಬ ನಿಬಂಧದಿಂದ ಕಲು ಷಿತವಾಗಿರುವುದು. ಇಂತಹವರಿಗೆ ಆಕಾಶವಾಣಿಯ ಮೂಲಕವಾಗಿ ಯಾದರೂ ಪುನಸ್ಸಂಬಂಧವನ್ನುಂಟುಮಾಡಿ ಅವರಿಬ್ಬರೂ ಅನುರಾಗ

ಬದ್ಧರಾಗಿದ್ದಂತೆ ವರ್ಣಿಸುವುದೆಂದರೆ ರಸಜ್ಞನಾದ ಕಾಳಿದಾಸನಿಗೆ ಹೇಗೆ ತಾನೆ ಮನಸ್ಸಿಗೆ ಒಗ್ಗೀತು? ಆದುದರಿಂದಲೇ ಕಾಳಿದಾಸನು ನಾಯಕ ನಾಯಕಿಯರನ್ನು ಉಪಾಯವಾಗಿ ಅಗಲಿಸಿ, ವಿಪ್ರಲಂಭದ ಮೂಲಕ ಅವರಿಬ್ಬರನ್ನೂ ಬಂಧಿಸಿದ್ದ ಸಹಜಾನುರಾಗಸೂತ್ರವನ್ನು ಮತ್ತಷ್ಟು ಬಲಪಡಿಸಿ, ನಾಯಕನಿದ್ದ ಸ್ಥಳಕ್ಕೆ ನಾಯಕಿಯೂ ಬರುವಂತೆ ಸಂವಿಧಾನವನ್ನು ಕಲ್ಪಿಸಿ, ಅವರಿಬ್ಬರಿಗೂ ಪ್ರಿಯತಮನಾದ ಸರ್ವದಮನನೆಂಬ ಕೊಂಡಿಯಿಂದ ಅವರನ್ನು ಒಟ್ಟುಗೂಡಿಸಿರುವುದನ್ನು ಕಂಡು ಯಾವ ಸಹೃದಯರು ತಾನೇ ಆನಂದಪರವಶರಾಗಲಾರರು?

ಮೇಲೆ ಹೇಳಿದ ವ್ಯತ್ಯಾಸಗಳು ಮಾತ್ರವಲ್ಲದೆ ಇನ್ನೂ ಹಲವು ಭೇದಗಳು ಎರಡು ಕಥೆಗಳಲ್ಲಿ ಕಂಡುಬರುವುವು. ಮೂಲಕಥೆಯಲ್ಲಿ ಧೀವರವೃತ್ತಾಂತವಾಗಲಿ ಸಾನುಮತಿಯ ಸಂಗತಿಯಾಗಲಿ ಧನಮಿತ್ರನ ಸುದ್ದಿಯಾಗಲಿ ಕಂಡುಬರುವುದಿಲ್ಲ. ಇವುಗಳಲ್ಲಿ ಪ್ರತಿಯೊಂದರ ಮೂಲಕವೂ ನಾಯಕನ ಗುಣಕ್ಕೆ ಕಳೆಯೇರಿರುವುದು. ಉಂಗುರವು ದೊರೆತ ಕೂಡಲೇ ದುಷ್ಯಂತನು, ತನ್ನ ನಾಯಕಿಯ ಜ್ಞಾಪಕವು ಬಂದು ಪಶ್ಚಾತ್ತಾಪ ಜ್ವಾಲೆಯು ಮನಸ್ಸಿನಲ್ಲಿ ಪ್ರಜ್ವಲಿಸುತ್ತಿದ್ದರೂ, ಅದನ್ನು ಶಮನ ಮಾಡಿಕೊಂಡು ಆ ಉಂಗುರವನ್ನು ಪಡೆದಿದ್ದ ಬೆಸ್ತನಿಗೆ ಉಂಗುರದ ಬೆಲೆಯನ್ನು ಪಾರಿತೋಷಿಕವಾಗಿ ಕೊಟ್ಟನೆಂದು ವರ್ಣಿಸಿರುವುದು ದೊರೆಯ ಧೈರ್ಯಸಂಪತ್ತಿಯನ್ನೂ ನ್ಯಾಯಪರತೆಯನ್ನೂ ಸೂಚಿಸುತ್ತಿರುವುದು. ಸಾನುಮತಿಯ ವೃತ್ತಾಂತಕಥನದಿಂದ ದುಷ್ಯಂತನ ಪಶ್ಚಾತ್ತಾಪಪೂರ್ವಕವಾದ ಅನುರಾಗಕ್ಕೆ ಒಂದು ಸಾಕ್ಷಿಯನ್ನು ಕಲ್ಪಿಸಿ ಆ ಅನುರಾಗದ ಆಳವನ್ನು ತೋರಿಸಿದಂತಾಗಿರುವುದು. ಮತ್ತೆ ಯಾರಾದರೂ ನಾಯಕನಾಗಿದ್ದರೆ ಶಕುಂತಲೆಯನ್ನು ಹುಡುಕಿಕೊಂಡು ಬರಲು ಎಷ್ಟೆಷ್ಟು ಏರ್ಪಾಡು ಮಾಡುತ್ತಿದ್ದನೋ? ಆದರೆ ಕಾಳಿದಾಸನು ತನ್ನ ನಾಯಕನ ವಿಷಯದಲ್ಲಿ ರಾಜ್ಯಪಾಲನ ಕರ್ತವ್ಯಪರಾಙ್ಮುಖತೆಗೆ ಎಲ್ಲಾದರೂ ಅವಕಾಶಕೊಡುವನೆ? ಅಪುತ್ರವಂತನಾಗಿ ಕಾಲವಾಗಿದ್ದ ಧನಮಿತ್ರನ ಆಸ್ತಿಯು ರಾಜಕೋಶಕ್ಕೆ ಸೇರಿಹೋಗತಕ್ಕ ವಿಷಯದಲ್ಲಿ ಮಂತ್ರಿಯು ಲೇಖನ ಮೂಲಕವಾಗಿ ಸೂಚಿಸಿದ್ದರೂ, ತನ್ನ ಅಗಾಧ

ವಾದ ಚಿಂತಾಸ್ರೋತೋಮಧ್ಯದಲ್ಲೊ, ರಾಜನು ಧನಮಿತ್ರನ ಹೆಂಡತಿಯ ರಲ್ಲಿ ಯಾರಾದರೂ ಗರ್ಭಿಣಿಯಾಗಿದ್ದ ಪಕ್ಷದಲ್ಲಿ ಆತನ ಆಸ್ತಿಯೆಲ್ಲವೂ ಆ ಗರ್ಭಸ್ಥ ಶಿಶುವಿಗೆ ದೊರೆಯುತಕ್ಕದೆಂದು ನಿಷ್ಕರ್ಷೆಮಾಡಿದುದರಲ್ಲಿ ದುಷ್ಯಂತನ ಕರ್ತವ್ಯಜ್ಞಾನವೂ ನಿರ್ಲೋಭವೂ ಪ್ರಜಾವತ್ಸಲತೆಯೂ ಬಹಳ ಚೆನ್ನಾಗಿ ವ್ಯಕ್ತವಾಗುವುವು.

ಇಷ್ಟುಮಾತ್ರವಲ್ಲದೆ, ಭಾರತದ ಶಕುಂತಲೋಪಾಖ್ಯಾನದಲ್ಲಿ ನಾಲ್ಕಾರು ಪಾತ್ರಗಳು ಮಾತ್ರ ಕಂಡುಬರುವುವು. ನಾಟಕದ ಕಥೆಯ ಪ್ರಕಾರವಾದರೋ ಭಾರತದ ಕಥೆಯ ಪಾತ್ರಗಳಲ್ಲದೆ ಇನ್ನೂ ಕಡೆಯ ಪಕ್ಷ ೨೫ ಹೊಸಪಾತ್ರಗಳು ರಂಗಸ್ಥಾನವನ್ನು ಪ್ರವೇಶಿಸಬೇಕಾಗಿರು ವುದು. ಇಷ್ಟೇ ಅಲ್ಲದೆ ಮತ್ತೆ ಹತ್ತಾರು ಹೊಸಪಾತ್ರಗಳ ಪ್ರಸಕ್ತಿಯೂ ನಾಟಕದಲ್ಲಿ ಕಂಡುಬರುವುದು. ಹೊಸ ಹೊಸ ಪಾತ್ರಗಳನ್ನು ನಿರ್ಮಿಸಿ ಕೊಳ್ಳಬೇಕೆಂದರೆ ಯಾವ ಗ್ರಂಥಕರ್ತನಿಗಾದರೂ ಸುಲಭ. ಆದರೆ ಪ್ರತಿಯೊಂದು ನೂತನ ಪಾತ್ರದಿಂದಲೂ ರಸಪರಿಪೋಷಣವಾಗುವಂತೆ ಸಂವಿಧಾನಕ್ರಮವನ್ನು ಏರ್ಪಡಿಸುವುದು ತಾನೆ ಎಷ್ಟುಜನ ಕವಿಗಳಿಗೆ ಸಾಧ್ಯವೆಂಬುದನ್ನು ಆಲೋಚಿಸತಕ್ಕದಾಗಿದೆ. ತನ್ನ ಕಥೆಯ ರಮ್ಯತೆ ಯನ್ನು ಹೆಚ್ಚಿಸುವುದಕ್ಕಾಗಿ ಕಾಳಿದಾಸನು ಕಥಾಭಾಗವನ್ನು ಬಹಳವಾಗಿ ಹೆಚ್ಚಿಸಿರುವನು. ಆದುದರಿಂದಲೇ, ನಾಟಕದಲ್ಲಿ ದೃಶ್ಯ (Scenes)ಗಳು ಮೂಲಕ್ಕಿಂತಲೂ ಹೆಚ್ಚಾಗಿವೆ. ಒಟ್ಟಿನಲ್ಲಿ ನಾಟಕದ ಒಂದು ಐದನೆಯ ಅಂಕಗಳಿಗೂ, ಏಳನೆಯ ಅಂಕದ ಸ್ವಲ್ಪ ಭಾಗಕ್ಕೂ ಭಾರತದ ಕಥೆಯ ಆಧಾರವು ಸಿಕ್ಕುವುದು. ಉಳಿದ ಭಾಗಗಳೆಲ್ಲವೂ ಕಾಳಿದಾಸನಿಂದಲೇ ನಿರ್ಮಿತವಾದುವು. ಸಕಲ ಸಹೃದಯಸ್ತುತವಾದ ನಾಲ್ಕನೆಯ ಅಂಕ ವೆಲ್ಲವೂ ಕಾಳಿದಾಸನ ಸ್ವತ್ವವೇ ಆಗಿರುವುದು.

## ೭. ಪಾತ್ರಗಳ ಸ್ವಭಾವೋನ್ಮೀಲನ

ಈಗ ಶಾಕುಂತಲದಲ್ಲಿ ಬರುವ ಪಾತ್ರಗಳ ಶೀಲ ಸ್ವಭಾವಗಳನ್ನು ಕುರಿತು ವಿಚಾರಮಾಡಬೇಕಾಗಿದೆ. ಸಾಧಾರಣ ಕವಿಗಳಂತೆ ಕಾಳಿದಾಸನು ತನ್ನ ಪಾತ್ರಗಳ ಗುಣಾವಗುಣಗಳನ್ನು ತಾನೇ ಎತ್ತಿತೋರಿಸಿಲ್ಲ. ಆತನು ಅಲ್ಲಲ್ಲಿ ಪ್ರಯೋಗಿಸಿರುವ ಸಂದರ್ಭಗಳಿಂದ ಪ್ರೇಕ್ಷಕ ಪಾಠಕ ವರ್ಗವೇ ಕಂಡುಹಿಡಿಯಬೇಕಾಗಿರುವುದು.

**ದುಷ್ಯಂತ**:—ದುಷ್ಯಂತನು ಈ ನಾಟಕದ ಕಥಾನಾಯಕನು. ಆತನು ಪುರುವಂಶ ಪ್ರದೀಪಕನು. ಆತನು ಚತುರಂತವಾದ ಭೂಮಂಡಲಕ್ಕೆ ಅಧಿಪತಿ. ಆತನು ಗಂಭೀರಾಕಾರನು. ಆತನ ಆಕೃತಿಯಿಂದಲೇ ಆತನ ಮಹಾನುಭಾವತ್ವವು ಪ್ರಕಟವಾಗುವಂತಿದ್ದಿತು. ಆತನ ಬಾಹುಗಳು ಪತ್ತನದ್ವಾರದ ಲಾಳಮುಂಡಿಗೆಗಳಂತೆ ದಪ್ಪವಾಗಿಯೂ ದೀರ್ಘವಾಗಿಯೂ ಇದ್ದುವು. ಆತನು ಉರಿಬಿಸಿಲಿನಲ್ಲಿ ಉತ್ಸಾಹದಿಂದ ಬೇಟೆಯಾಡುತ್ತಿದ್ದಾಗಲೂ ಸಹ ಕ್ಲೇಶವಿಲ್ಲದೆಯೂ ಕಾಂತಿಗುಂದದೆಯೂ ಗಿರಿಚರಗಜದಂತೆ ಸತ್ವಸಾರವುಳ್ಳವನಾಗಿದ್ದನು. ಆತನು ಚತುರನೂ ಮಧುರಪ್ರಿಯಭಾಷಿಯೂ ಆಗಿದ್ದನು.

ದುಷ್ಯಂತನು ಧನುರ್ವಿದ್ಯಾಪ್ರವೀಣನು; ಆದುದರಿಂದಲೇ ಸೂತನು ಆತನಿಗೆ ಧನುರ್ಧರಾಗ್ರೇಸರನಾದ ಪಿನಾಕಧರನ ಸಾಮ್ಯವನ್ನು ಕೊಟ್ಟಿರುವನು. ಶತ್ರುಮಿತ್ರರು ಒಂದೇ ಕಡೆಯಲ್ಲಿರುವಾಗ ಮಿತ್ರನನ್ನು ಉಳಿಸಿ ಶತ್ರುವನ್ನು ಕೊಲ್ಲಲು ಬೇಕಾದ ಧನುರ್ವಿದ್ಯಾಕೌಶಲವು ಆತನಿಗಿದ್ದಿತು. ಇಷ್ಟಿವಿಘ್ನಕರ್ತರಾದ ರಾಕ್ಷಸರನ್ನು ಅಸಹಾಯನಾಗಿ ಇದಿರಿಸಿ, ತನ್ನ ಧನುಷ್ಟಂಕಾರ ಮಾತ್ರದಿಂದಲೇ ಅವರ ಬಾಧೆಯನ್ನು ಆತನು ಪರಿಹಾರ ಮಾಡಿದನು. ದುಷ್ಟರ ಬಾಧೆಯನ್ನು ತಪ್ಪಿಸುವಂತಹವನು ದುಷ್ಯಂತ ಮಹಾರಾಜನೇ ಎಂಬುದನ್ನು ತಪೋವನಪ್ರದೇಶಗಳಲ್ಲಿದ್ದ ಬಾಲಕಿಯರೂ ಸಹ ತಿಳಿದಿದ್ದರು. ಆತನ ದರ್ಪದಿಂದ ತಪೋವನಗಳೆಲ್ಲವೂ ನಿರ್ಬಾಧಿತವಾಗಿದ್ದುವು. ಇಂತಹ ಪ್ರತಾಪಶಾಲಿಯಾದ ದುಷ್ಯಂತನ ಪ್ರಖ್ಯಾತಿಯು ಭೂಲೋಕದಲ್ಲಿ ಹರಡಿದ್ದುದು ಮಾತ್ರವಲ್ಲದೆ ಸ್ವರ್ಗ

ಲೋಕದಲ್ಲಿಯೂ ವ್ಯಾಪಿಸಿದ್ದಿತು. ಸೂರ್ಯನು ಪರಿಹರಿಸಲಾರದ ನಿಶಾ ತಿಮಿರವನ್ನು ಚಂದ್ರನು ನಿವಾರಿಸುವಂತೆ ಇಂದ್ರನಿಗೆ ಅಜಯ್ಯರಾಗಿದ್ದ ರಾಕ್ಷಸರನ್ನು ದುಷ್ಯಂತನು ಅಣಗಿಸುತ್ತಿದ್ದನು. ಇಂದ್ರನ ಯುದ್ಧಕ್ಷೇತ್ರ ಗಳಲ್ಲಿ ದುಷ್ಯಂತನು ಮುಂದಾಳಾಗಿರುತ್ತಿದ್ದುದರಿಂದ ಇಂದ್ರನ ಕೈಯು ಲ್ಲಿದ್ದ ವಜ್ರಾಯುಧವು ಆಭರಣದಂತಿರುತ್ತಿದ್ದಿತು. ಇಂತಹ ಪ್ರತಾಪಶಾಲಿ ಯಾಗಿದ್ದುದರಿಂದಲೇ ದುಷ್ಯಂತನು ಸ್ವರ್ಗಕ್ಕೆ ಹೋದ ಕೆಲವು ಗಂಟೆ ಗಳ ಕಾಲದಲ್ಲಿಯೇ ಕಾಲನೇಮಿಪುತ್ರರನ್ನು ಜಯಿಸಿಬಿಟ್ಟನು. ಸ್ವರ್ಗ ನಿವಾಸಿಗಳು ದುಷ್ಯಂತನ ಚರಿತ್ರೆಯನ್ನು ಕಲ್ಪಲತಾಲಬ್ಧವಾದ ವಸ್ತ್ರಗಳ ಮೇಲೆ ಲಿಖಿಸಿಡುತ್ತಿದ್ದರು. ಈತನ ಧನುಸ್ಸಿಗೂ ಇಂದ್ರನ ವಜ್ರಾಯು ಧಕ್ಕೂ ಜಯವುಂಟಾಗಲೆಂದು ಸುರಯುವತಿಯರು ಸದಾ ಕೋರುತ್ತ ಲಿದ್ದರು. ತ್ರಿಲೋಕಾಧಿಪತಿಯಾದ ಇಂದ್ರನು ದುಷ್ಯಂತನನ್ನು ತನ್ನೊ ಡನೆ ಒಂದೇ ಪೀಠದಲ್ಲಿ ಕುಳ್ಳಿರಿಸಿಕೊಂಡು ತಾನು ಧರಿಸಿದ್ದ ಮಂದಾರ ಮಾಲೆಯನ್ನು ಆತನಿಗೆ ಹಾಕಿ ಮನ್ನಣೆ ಮಾಡಿದನು.

ದುಷ್ಯಂತನು ಇಷ್ಟು ಪ್ರತಾಪಶಾಲಿಯಾಗಿದ್ದರೂ ಬಹಳ ವಿನಯ ಶಾಲಿಯು. ಅತ್ಯಂತ ಉತ್ಸಾಹದಿಂದ ಬೆನ್ನಟ್ಟಿಕೊಂಡು ಬಂದಿದ್ದ ಹರಿ ಣಕ್ಕೆ ಬಾಣವನ್ನು ಪ್ರಯೋಗಿಸುವ ಹೊತ್ತಿಗೆ ಸರಿಯಾಗಿ ಇದಿರಿಗೆ ಬಂದ ವೈಖಾನಸರ ಮಾತಿಗೆ ಕಟ್ಟುಬಿದ್ದು, ತನ್ನಮೃಗಯಾವಿನೋದವನ್ನು ತಟ್ಟನೆ ನಿಲ್ಲಿಸಿದನು. ಅವರ ಆಶೀರ್ವಾದವನ್ನು ಪ್ರಣಾಮಪೂರ್ವಕವಾಗಿ ಅಂಗೀಕರಿಸಿರುವನು. ತಪೋವನಪ್ರಾಂತವನ್ನು ಸೇರಿದಕೂಡಲೆ ತನ್ನ ರಥಧ್ವನಿಯಿಂದ ತಪಸ್ವಿಗಳ ತಪೋಭಂಗವಾಗಕೂಡದೆಂದು ರಥವನ್ನು ಆಶ್ರಮದ ಹೊರವಳಯದಲ್ಲಿ ನಿಲ್ಲಿಸುವನಲ್ಲದೆ, ತನ್ನ ಧನುರ್ಭಾಣ ಗಳನ್ನೂ ಆಭರಣಗಳನ್ನೂ ತೆಗೆದುಹಾಕಿ ವಿನೀತ ವೇಷದಿಂದ ಆಶ್ರಮ ವನ್ನು ಪ್ರವೇಶಿಸಿರುವನು. ಕಣ್ವರು ಆಶ್ರಮದಲ್ಲಿಲ್ಲದಿದ್ದರೂ ಪುಣ್ಯಾ ಶ್ರಮವನ್ನು ಸಂದರ್ಶಿಸಿಕೊಂಡು ಹೋಗುವುದು ಯುಕ್ತವೆಂದು ತಿಳಿದು ಹಾಗೆ ಮಾಡಿದನು. ಇಷ್ಟಿಸಂರಕ್ಷಣದಲ್ಲಿ ಸಹಾಯವನ್ನು ಕೋರಲು ಬಂದಿದ್ದ ಋಷಿಪುತ್ರರು "ಆಶ್ರಮವಾಸಿಗಳು ತಮ್ಮನ್ನು ಹೀಗೆ **ಪ್ರಾರ್ಥಿ ಸುವರು**" ಎಂದು ಹೇಳುವಾಗ, "ಅವರು ಏನೆಂದು **ಆಜ್ಞಾಪಿಸುವರು**?"

ಎಂದು ಕೇಳಿರುವನು. ಕಣ್ವಶಿಷ್ಯರೂ ಗೌತಮಿಯೂ ದುಷ್ಯಂತನನ್ನು ಆಕ್ಷೇಪಿಸಿದಾಗಲೂ ಸಹ ಸ್ವಲ್ಪವಾದರೂ ಕ್ರುದ್ಧನಾಗದೆ ಅವರೊಡನೆ ಮೊದಲಿಂದ ಕಡೆಯ ವರೆಗೂ ಬಹುವಿನಯದಿಂದ ಸಂಭಾಷಿಸಿರುವನು. ಮಾರೀಚಾಶ್ರಮಕ್ಕೆ ಹೋಗಿ ಮಾರೀಚದಾಕ್ಷಾಯಣಿಯರಿಗೆ ಅಭಿವಂದಿಸುವಾಗ "**ವಾಸವಭೃತ್ಯನಾದ** ದುಷ್ಯಂತನು ಪ್ರಣಮಿಸುವನು" ಎಂದು ಹೇಳಿಕೊಂಡಿರುವನೇ ಹೊರತು "ಇಂದ್ರಸಖನಾದ ದುಷ್ಯಂತನು" ಎಂದು ಹೇಳಿಕೊಂಡಿಲ್ಲ. ಸ್ವಲ್ಪ ಹೊತ್ತಿಗೆ ಮುಂಚೆ ಅಪಾರವಾದ ಗೌರವವು ಇಂದ್ರನಿಂದ ತನಗೆ ದೊರಕಿದ್ದರೂ ಪೂಜ್ಯರ ಸನ್ನಿಧಿಯಲ್ಲಿ ಆತನು ತೋರಿಸಿರುವ ಈ ನಮ್ರತೆಯು ಬಹಳ ಸ್ತುತ್ಯವಾಗಿದೆ.

ದುಷ್ಯಂತನು ಶಿಷ್ಟರಕ್ಷಣಶೀಲನು, ಆರ್ತತ್ರಾಣಪರಾಯಣನು. ವನಗಜ ವೃತ್ತಾಂತದಿಂದ ಕಳವಳಪಟ್ಟಿದ್ದ ಬಾಲಕಿಯರನ್ನು ಪರ್ಣಶಾಲೆಗೆ ಕಳುಹಿಸಿ, ತನ್ನ ಸೈನಿಕರಿಂದ ತಪೋವನಕ್ಕೆ ಬಾಧೆಯುಂಟಾಗದಂತೆ ನೋಡಿಕೊಳ್ಳಲು ತಟ್ಟನೆ ಹೊರಟುಬಿಟ್ಟಿರುವನು. ಈ ಸಮಯದಲ್ಲಿ ತನ್ನ ಮನೋಹಾರಿಣಿಯಾದ ಶಕುಂತಲೆಯು ತನ್ನ ಸನ್ನಿಧಿಯನ್ನು ಬಿಟ್ಟುಹೋಗುವಳಲ್ಲಾ ಎಂಬ ಸ್ವಾರ್ಥತೆಯು ಆತನಿಗೆ ತಲೆದೋರಲಿಲ್ಲ. ಶಕುಂತಲೆಯನ್ನು ಗಾಂಧರ್ವವಿಧಿಯಿಂದ ಪರಿಗ್ರಹಿಸಿದ ಮೇಲೆ ಆಕೆಯ ಅಗಲುವಿಕೆಯಿಂದ ಸಂತಪ್ತನಾಗಿದ್ದಾಗಲೂ ಕೂಡ ರಾಕ್ಷಸರ ಛಾಯೆಗಳ ವೃತ್ತಾಂತವನ್ನು ಕೇಳಿದಕೂಡಲೇ ತನ್ನ ವಿರಹ ಸಂತಾಪವನ್ನೆಲ್ಲಾ ಮರೆತು "ಇಗೋ ಬಂದೆನು! ಬಂದೆನು!" ಎಂದು ಹೇಳುತ್ತಾ ರಾಕ್ಷಸರ ಬಾಧೆಯನ್ನು ನಿವಾರಿಸಲು ಹೊರಟುಬಿಟ್ಟಿರುವುದು ಆತನ ಶಿಷ್ಟರಕ್ಷಣಪರಾಯಣತೆಗೆ ಒಳ್ಳೆಯ ನಿದರ್ಶನವಾಗಿರುವುದು. ಕಣ್ವಾಶ್ರಮದಿಂದ ಋಷಿಶಿಷ್ಯರು ಬಂದಿದ್ದ ವಿಷಯವನ್ನು ಕೇಳಿದ ಕೂಡಲೇ ಆಶ್ರಮಕ್ಕೆ ಯಾವ ಬಾಧೆಯು ತಟ್ಟಿತೋ ಎಂದು ಹೆದರಿರುವನು. ಸಾಧುಗಳ ಧರ್ಮಕಾರ್ಯಗಳು ನಿರ್ವಿಘ್ನವಾಗಿ ನೆರವೇರುತ್ತಿದ್ದುದನ್ನು ಕೇಳಿ ಆಗ ತನ್ನ "ರಾಜ" ಶಬ್ದವು ಸಾರ್ಥಕವಾಯಿತು ಎಂದು ಹೇಳಿಕೊಂಡಿರುವನು. ತನ್ನ ಪ್ರಿಯೆಯನ್ನು ಪರಿತ್ಯಜಿಸಿದುದಕ್ಕಾಗಿ ಪಶ್ಚಾತ್ತಾಪದಿಂದ ಬಹಳವಾಗಿ ಕೊರಗುತ್ತಿದ್ದಾಗಲೂ ತನ್ನ ಅನಪತ್ಯತೆಯಿಂದ ವ್ಯಥೆಪಡು

ತ್ತಿದ್ದಾಗಲೂ ಸಹ, ಮಾಢವ್ಯನ ಆರ್ತಧ್ವನಿಯನ್ನು ಕೇಳಿದ ಕೂಡಲೇ ಅವನ ರಕ್ಷಣೆಗಾಗಿ ಹೊರಟಿರುವನು.

ದುಷ್ಯಂತನು ಬಹಳ ಧರ್ಮಪರನು. ಅನೃತವನ್ನು ಹೇಳಲು ಅವನ ಮನಸ್ಸಿಗೆ ಒಪ್ಪದು. ಅನಸೂಯೆಗೆ ತಾನು ಯಾರೆಂಬುದನ್ನು ಯಥಾಸ್ಥಿತಿಯಾಗಿ ಹೇಳಿಬಿಟ್ಟರೆ, ರಾಜನಿಗೆ ಸಲ್ಲಬೇಕಾಗಿದ್ದ ಸತ್ಕಾರ ವನ್ನು ತೋರಿಸದಿದ್ದುದಕ್ಕಾಗಿ ಶಕುಂತಲಾದಿಗಳಿಗೆ ಎಲ್ಲಿ ಮನೋವ್ಯಥೆ ಯಾಗುವುದೋ ಎಂಬ ಚಿಂತೆಯು ಒಂದು ಕಡೆಯೂ, ತಾನು ರಾಜನೇ ಅಲ್ಲವೆಂದು ಸುಳ್ಳುಹೇಳಿದರೆ ತನಗೆ ಅನೃತದೋಷವುಂಟಾಗುವುದಲ್ಲಾ ಎಂಬ ಚಿಂತೆಯು ಮತ್ತೊಂದು ಕಡೆಯೂ ಉಂಟಾದಾಗ, ಎರಡು ಬಗೆಯ ಸಂಕಟಗಳೂ ತಪ್ಪುವಂತೆ ತನ್ನ ವೃತ್ತಾಂತವನ್ನು ತಿಳಿಸಿರುವನು. ತನ್ನ ಉಂಗುರವು ದೊರೆತು ವಾಸ್ತವಾಂಶವು ತಿಳಿದ ಸಂದರ್ಭದಲ್ಲಿಯೂ ರಾಜಭಟರ ಕೈಗೆ ಸಿಕ್ಕಿದ್ದ ಬೆಸ್ತನ ಯೋಗಕ್ಷೇಮವನ್ನು ಮರೆಯಲಿಲ್ಲ. ಆ ಉಂಗುರದ ಬೆಲೆಯನ್ನು ಆ ಬಡಪಾಯಿಗೆ ಕೊಡಿಸಿರುವನು. ದುಷ್ಯಂ ತನು ತನ್ನ ಹಿರಿಯರಂತೆಯೇ ಸರ್ವದಾ ಧರ್ಮನಿರತನಾಗಿಯೇ ಇದ್ದು ಕೊಂಡಿದ್ದುದರಿಂದ ಆತನ ಮನಸ್ಸು ಪರಿಹಾರ್ಯ ವಿಷಯಗಳಲ್ಲಿ ಪ್ರವೇಶಿ ಸುತ್ತಿರಲಿಲ್ಲ. ಧನಮಿತ್ರನು ಅಪುತ್ರವಂತನಾಗಿ ಸತ್ತುಹೋಗಿದ್ದುದರಿಂದ ಆತನ ಆಸ್ತಿಯೆಲ್ಲವೂ ರಾಜನಿಗೆ ಸೇರಬೇಕೆಂದು ಮಂತ್ರಿಯು ಸೂಚಿ ಸಿದ್ದರೂ, ಧನಮಿತ್ರನ ಪತ್ನಿಯ ಗರ್ಭಸ್ಥವಾದ ಶಿಶುವಿಗೇ ಅದು ಸಲ್ಲು ವಂತೆ ತೀರ್ಮಾನಿಸುವನು. ಪರಸ್ತ್ರೀಯರ ವಿಷಯದಲ್ಲಿಯೂ ದುಷ್ಯಂತ ನಲ್ಲಿ ನಿಸ್ಪೃಹತೆಯು ಚೆನ್ನಾಗಿ ಕಂಡುಬರುವುದು. ತಪೋವನದಲ್ಲಿ ಗಿಡ ಗಳಿಗೆ ನೀರೆರೆಯುತ್ತಾ ಸಲ್ಲಾಪಮಾಡಿಕೊಳ್ಳುತ್ತಿದ್ದ ತಪೋವನ ಕನ್ಯಕೆ ಯರಿದಿರಿಗೆ ತಟ್ಟನೆ ಕಾಣಿಸಿಕೊಳ್ಳಲಿಲ್ಲ. ದುಷ್ಯಂತನ ಬಳಿಗೆ ಬಂದಿದ್ದ ಶಕುಂತಲೆಯ ಆಕೃತಿಯು ದರ್ಶನೀಯವಾಗಿದೆ ಎಂದು ಪ್ರತೀಹಾರಿಯು ಹೇಳಲು "ಪರಸ್ತ್ರೀಯರನ್ನು ನೋಡಲಾಗದು" ಎಂದು ಅವಳಿಗೆ ಬೋಧಿಸಿರುವನು. ಪರಸ್ತ್ರೀದರ್ಶನಕಾಲುಷ್ಯಕ್ಕೆ ಆತನು ಹೆದರಿರುವನು. ಸರ್ವದಮನನ ಬಾಲಲೀಲೆಗಳಿಂದ ಮುಗ್ಧನಾಗಿ ಅವನ ತಾಯಿಯು ಯಾರೋ ಎಂಬ ಕುತೂಹಲವು ಸಹಜವಾಗಿ ಹುಟ್ಟಿದಾಗಲೂ ಕೂಡ

"ಅನ್ಯಪತ್ನಿಯ ವಿಚಾರವು ಅನಾರ್ಯವಾದುದು" ಎಂದು ಹೇಳಿಕೊಂಡಿರುವನು. ಧರ್ಮಪರನಲ್ಲದವನು ತನ್ನ ಬಳಿಗೆ ಬಂದಿದ್ದ ಅವಮ್ಲಾನ ಲಾವಣ್ಯವತಿಯನ್ನು ಪರಿಗ್ರಹಿಸಬೇಕೇ ಬೇಡವೇ ಎಂಬ ವಿಚಾರಕ್ಕೆ ಅವಕಾಶವನ್ನೇ ಕೊಡುತ್ತಿರಲಿಲ್ಲ. ತನ್ನ ಮನೆಯಲ್ಲೂ ಭೂತಬಾಧೆಯುಂಟಾಗಿದ್ದಿತೆಂದು ಭಾವಿಸಿ ತಾನು ಯಾವ ಅಧರ್ಮವನ್ನು ಆಚರಿಸಿದ್ದೆನೋ ಎಂದು ಹೆದರಿರುವನು.

ರಾಜರಲ್ಲಿರಬೇಕಾದ ಗುಣಗಳಲ್ಲಿ ಅತ್ಯಂತ ಮುಖ್ಯವಾದುದು ಪ್ರಜಾವಾತ್ಸಲ್ಯವು. ಕೊಡೆಯನ್ನು ಹಿಡಿದುಕೊಳ್ಳುವುದರಿಂದ ಹೇಗೆ ಶ್ರಮವೂ ತಾಪಪರಿಹಾರವೂ ಆಗುವುವೋ ರಾಜ್ಯಭಾರದಿಂದಲೂ ಹಾಗೆಯೇ ಎಂದು ದುಷ್ಯಂತನು ಭಾವಿಸಿದ್ದ ಕಾರಣ ಆತನು ಸುಖೈಕ ಪರಾಯಣನಾಗಿರಲಿಲ್ಲ; ಪ್ರಜಾಹಿತಕ್ಕಾಗಿ ಸ್ವಲ್ಪವೂ ಹಿಂದೆಗೆಯುತ್ತಿರಲಿಲ್ಲ; ಆದುದರಿಂದಲೇ ಆಗತಾನೆ ಧರ್ಮಾಸನವನ್ನು ಬಿಟ್ಟು ಎದ್ದಿದ್ದರೂ ಕಣ್ವಶಿಷ್ಯಾಗಮನವೃತ್ತಾಂತವನ್ನು ಕೇಳಿದಕೂಡಲೇ ಹಿಂದಿರುಗಿ ಬಂದು ಅವರ ಸಂಗತಿಯನ್ನು ವಿಚಾರಿಸಿರುವನು. ತನಗೆ ಪತ್ನೀವಿರಹವುಂಟಾಗಿದ್ದರೂ ಸ್ವಾರ್ಥಪರನಾಗಿ ಆಕೆಗೋಸ್ಕರ ಎಲ್ಲೆಲ್ಲೂ ಹುಡುಕಿಸುತ್ತ ಪ್ರಜೆಗಳ ಯೋಗಕ್ಷೇಮವನ್ನು ಪರಿತ್ಯಜಿಸಿರಲಿಲ್ಲ. ಧರ್ಮಾಸನದಲ್ಲಿ ಕುಳಿತುಕೊಳ್ಳಲು ಒಂದು ದಿನದ ಮಟ್ಟಿಗೆ ಅವಕಾಶವಿಲ್ಲದಿದ್ದರೂ ಮುಖ್ಯ ವಿಷಯಗಳನ್ನು ಪತ್ರದಲ್ಲಿ ಬರೆಯಿಸಿ ತರಿಸಿಕೊಂಡು ವ್ಯವಸ್ಥೆಪಡಿಸುವನು. ಬಂಧು ವಿಯೋಗಕ್ಕೆ ಒಳಗಾದ ಪ್ರಜೆಗಳು ಪಾಪಕ್ಕೆ ಅವಕಾಶವಿಲ್ಲದಂತೆ ತನ್ನನ್ನು ಆಯಾ ಬಂಧುವಿನಂತೆ ಭಾವಿಸಬಹುದೆಂದು ಸಾರಿಸಿರುವನು. ಇಂದ್ರನ ಕೋರಿಕೆಗೆ ಅನುಸಾರವಾಗಿ ಸ್ವರ್ಗಕ್ಕೆ ಹೋಗಬೇಕಾದಾಗಲೂ ದುಷ್ಯಂತನು ತನ್ನ ಪ್ರಜೆಗಳ ಯೋಗಕ್ಷೇಮವನ್ನು ಮರೆಯಲಿಲ್ಲ; ತನಗೆ ಒದಗಿದ್ದ ಕಾರ್ಯಾಂತರವನ್ನೂ, ತಾನು ಬರುವವರೆಗೂ ಪ್ರಜೆಗಳನ್ನು ಪಾಲಿಸುತ್ತಿರಬೇಕೆಂಬುದನ್ನೂ, ಮಂತ್ರಿಗೆ ಹೇಳಿಕಳುಹಿಸಿ ಪ್ರಯಾಣಮಾಡಿರುವನು. ಭರತವಾಕ್ಯದಲ್ಲಿ "ಪ್ರವರ್ತತಾಂ ಪ್ರಕೃತಿ ಹಿತಾಯ ಪಾರ್ಥಿವಃ" ಎಂದು ದುಷ್ಯಂತನು ಹೇಳಿರುವುದನ್ನು ನೋಡಿದರೆ ಪ್ರಜಾಹಿತವೇ ರಾಜರ ಮುಖ್ಯೋದ್ದೇಶವಾಗಿರ

ಬೇಕೆಂದು ಭಾವಿಸಿದ್ದಂತೆ ತೋರುವುದು. ದುಷ್ಯಂತನು ಹೀಗೆ ಶಿಷ್ಟ ರಕ್ಷಣವನ್ನೂ ದುಷ್ಟ ಶಿಕ್ಷಣವನ್ನೂ ಮಾಡುತ್ತಿದ್ದುದರಿಂದ ರಾಜ್ಯದಲ್ಲಿ ಸಕಲ ಪ್ರಜೆಗಳೂ ಆತನನ್ನು ಆಪ್ತಬಂಧುವೆಂದು ಭಾವಿಸಬಹುದಾಗಿದ್ದಿತು. ಪ್ರಜೆಗಳಲ್ಲಿ ಕಪಟಾಚರಣವಿರಲಿಲ್ಲ. ಚಾತುರ್ವರ್ಣ್ಯಗಳವರಲ್ಲಿ ಅತ್ಯಂತ ಅಧಮನಾದವನೂ ಕೂಡ ಕುಪಥದಲ್ಲಿ ನಡೆಯುತ್ತಿರಲಿಲ್ಲ.

ದುಷ್ಯಂತನಲ್ಲಿ ಇನ್ನೂ ಕೆಲವು ಗುಣಾತಿಶಯಗಳು ಕಂಡು ಬರುವುವು. ಆತನು ಕರುಣಾರ್ದ್ರಹೃದಯನು. ಆಶ್ರಮಸಂದರ್ಶನಕ್ಕೆ ಹೊರಡುವಾಗ ರಥಾಶ್ವಗಳ ಬೆನ್ನುತೊಳೆದು ದಣಿವಾರಿಸಬೇಕೆಂದು ಸಾರಥಿಗೆ ತಿಳಿಸಿ ಹೊರಡುವನು. ಅನಪತ್ಯತೆಯ ದುಃಖವನ್ನು ಸ್ವತಃ ಅನುಭವಿಸಿದ್ದುದರಿಂದ ತನ್ನ ಪ್ರಜೆಗಳೊಳಗೆ ಅಪುತ್ರವಂತರ ವಿಷಯದಲ್ಲಿ ಆತನು ಬಹಳ ಸಹಾನುಭೂತಿಯನ್ನು ತೋರಿಸುವನು. ದುಷ್ಯಂತನಿಗೆ ಸೃಷ್ಟಿ ಸೌಂದರ್ಯದ ವಿಷಯದಲ್ಲಿ ಬಹಳ ಅಭಿರುಚಿಯಿರುವುದು. ಆದುದರಿಂದಲೇ ಸೃಷ್ಟಿವೈಚಿತ್ರ್ಯಗಳನ್ನು ಬಲು ಎಚ್ಚರಿಕೆಯಿಂದ ಪರಿಶೀಲಿಸಿರುವನು. ಪ್ರಾಣಭಯದಿಂದ ಓಡುತ್ತಿರುವ ಜಿಂಕೆಯನ್ನೂ, ವೇಗವಾಗಿ ಚಲಿಸುತ್ತಿರುವ ರಥದಲ್ಲಿ ಕುಳಿತು ನೋಡಿದರೆ ಕಂಡುಬರುವ ದೃಶ್ಯಗಳನ್ನೂ, ತಪೋವನ ಪ್ರಾಂತದ ಚಿಹ್ನೆಗಳನ್ನೂ, ಕಾಡೆಮ್ಮೆ ಮುಂತಾದ ಮೃಗಗಳು ಬೇಟೆಗಾರರ ಬಾಧೆಯಿಲ್ಲದಿರುವಾಗ ಹೇಗೆ ವಿಶ್ರಮಿಸಿಕೊಳ್ಳುತ್ತಿರುವುವೆಂಬ ವಿಷಯವನ್ನೂ, ಶಕುಂತಲೆಯು ಎಲೆ ಗಿಡಗಳ ಸಾಲುಗಳ ಮಾರ್ಗವಾಗಿಯೇ ಹೋಗಿರಬೇಕೆಂದು ಸೂಚಿಸುತ್ತಿದ್ದ ವಿಷಯಗಳನ್ನೂ, ವೇಗವಾಗಿ ಇಳಿಯುತ್ತಿರುವ ರಥದಿಂದ ಕಂಡುಬರುವ ದೃಶ್ಯಗಳನ್ನೂ ದುಷ್ಯಂತನು ವರ್ಣಿಸಿರುವುದನ್ನು ನೋಡಿದರೆ ಆತನ ಪರಿಶೀಲನಪಟುತ್ವವೂ ವರ್ಣನಾಕೌಶಲವೂ ಚೆನ್ನಾಗಿ ಕಂಡು ಬರುವುವು. ಆತನು ಬರೆದಿದ್ದ ಶಕುಂತಲೆಯ ಚಿತ್ರಪಟವನ್ನು ಕಂಡು ದೇವಸ್ತ್ರೀಯಾದ ಸಾನುಮತಿಯೂ ಕೂಡ ನಿಜವಾಗಿಯೂ ಶಕುಂತಲೆಯನ್ನೇ ನೋಡಿದಂತೆ ಭ್ರಮಿಸಿದುದು ಆತನ ಚಿತ್ರರಚನಾಕೌಶಲಕ್ಕೆ ಉತ್ತಮವಾದ ನಿದರ್ಶನವಾಗಿರುವುದು. ಆ ಪಟದಲ್ಲಿ ಮತ್ತೆ ಏನೇನನ್ನು ಬರೆಯಬೇಕೆಂದಿದ್ದನೋ ಆ ವಿಷಯಗಳನ್ನು ಕುರಿತು ಹೇಳಿರುವುದನ್ನು ನೋಡಿದರೆ

ದುಷ್ಯಂತನ ಚಿತ್ರಕಲಾಪರಿಶ್ರಮವು ಎಷ್ಟು ಪ್ರೌಢವಾಗಿದ್ದಿತೆಂದು ಗೊತ್ತಾಗುವುದು.

ದುಷ್ಯಂತನಲ್ಲಿ ಕೆಲವು ದೋಷಗಳು ಕಂಡುಬರುವುವೆಂದು ಹೇಳುವುದುಂಟು. ಇವುಗಳಲ್ಲಿ ಮೊದಲನೆಯದು ನಿಷ್ಕಾರುಣ್ಯವು. ನಿಶ್ಚಿಂತೆಯಿಂದ ಆಶ್ರಮದಲ್ಲಿದ್ದ ಶಕುಂತಲೆಯನ್ನು ತನ್ನ ವಾಕ್ಚಾತುರ್ಯದಿಂದ ನಂಬಿಸಿ ಮದುವೆಯಾಗಿ, ಆಕೆಯೇ ತನ್ನ ಬಳಿಗೆ ಬಂದಾಗ ನಿರಾಕರಿಸಿದುದು ತಪ್ಪೆಂಬುದು ಇಂತಹವರ ಅಭಿಪ್ರಾಯವಾಗಿರುವುದು. ಇಂತಹ ಆಕ್ಷೇಪಣೆಯನ್ನು ತಪ್ಪಿಸುವುದಕ್ಕಾಗಿಯೇ ಕಾಳಿದಾಸನು ದೂರ್ವಾಸರ ಶಾಪ ವೃತ್ತಾಂತವನ್ನು ಕಲ್ಪಿಸಿರುವನು. ಶಕುಂತಲಾ ನಿರಾಕರಣಕ್ಕೆ ಶಾಪವು ಕಾರಣವೇ ಹೊರತು ಮತ್ತೆ ಯಾವುದೂ ಅಲ್ಲವೆಂದು ನಾಟಕವನ್ನು ಎಚ್ಚರಿಕೆಯಿಂದ ಓದಿನೋಡಿದವರಿಗೆ ಸ್ಪಷ್ಟವಾಗುವುದು. ಅಂಗುಳೀಯಕ ದರ್ಶನಾನಂತರ ದುಷ್ಯಂತನು ಅನುಭವಿಸಿರುವ ಪಶ್ಚಾತ್ತಾಪವನ್ನು ಅಷ್ಟು ಹೆಚ್ಚಾಗಿ ಕವಿಯು ವರ್ಣಿಸಿರುವುದನ್ನು ನೋಡಿದರೆ ಈ ವಿಷಯದಲ್ಲಿ ಯಾವ ಸಂಶಯಕ್ಕೂ ಅವಕಾಶವಿರುವುದಿಲ್ಲ.

ದುಷ್ಯಂತನು ಅನೇಕ ಪತ್ನಿಯರನ್ನು ಮದುವೆಯಾಗಿದ್ದುದೂ ಒಂದು ದೋಷವೆಂದು ಕೆಲವರು ಆಧುನಿಕರು ಆಕ್ಷೇಪಿಸುವರು. ಈಗಣ ಕೆಲವು ಸಮಾಜಗಳಲ್ಲಿ ಬಹುಪತ್ನೀ ಸ್ವೀಕಾರವು ಅಭಿನಂದನೀಯವಾಗದಿದ್ದ ಮಾತ್ರಕ್ಕೇ ಪೂರ್ವ ಕಾಲದಲ್ಲಿಯೂ ಹಾಗೆಯೇ ಇರಬೇಕೆಂದು ನಿರ್ಧರಿಸುವುದು ಸಾಧುವಲ್ಲ. ಐಶ್ವರ್ಯವಂತರು ಅನೇಕ ಮಂದಿ ಪತ್ನಿಯರನ್ನು ಮದುವೆಯಾಗುತ್ತಿದ್ದುದು ಪೂರ್ವ ಕಾಲದಲ್ಲಿ ರೂಢಿಯಾಗಿದ್ದಿತೆಂದು ಧನಮಿತ್ರವೃತ್ತಾಂತದಿಂದ ತಿಳಿದುಬರುವುದು.

ನಾಟಕದ ಮೂರಾರನೆಯ ಅಂಕಗಳಲ್ಲಿ ದುಷ್ಯಂತನು ಬಹಳವಾಗಿ ವಿರಹದುಃಖಪಡುತ್ತಿರುವಂತೆ ಕಾಣಿಸುವನು. ಆದುದರಿಂದ ಸ್ತ್ರೀವ್ಯಾಮೋಹವು ಆತನಿಗೆ ಹೆಚ್ಚು ಎಂದು ಕೆಲವರು ದೋಷಾರೋಪಣೆ ಮಾಡುವುದುಂಟು. ಶೃಂಗಾರರಸ ಪ್ರಧಾನವಾದ ಈ ನಾಟಕದಲ್ಲಿ ಕಥಾನಾಯಕನು ಹಾಗೆ ಆಚರಿಸಿರುವುದರಲ್ಲಿ ಲಾಕ್ಷಣಿಕರಿಗೆ ಯಾವದೋಷವೂ ಕಂಡುಬರುವುದಿಲ್ಲ. ದುಷ್ಯಂತನು ತನ್ನ ವಿರಹದುಃಖದಿಂದ ಕರ್ತವ್ಯ ಪರಾ

ಜ್ಞಾಪಿಸಲಾಗಲಿಲ್ಲವಾದ ಕಾರಣ ಈ ತರದ ಆಕ್ಷೇಪಣೆಗೆ ಅವಕಾಶವಿಲ್ಲ. ಇದೂ ಅಲ್ಲದೆ, ಪತ್ನೀಪರಿತ್ಯಾಗ ಮಾಡಿದುದು ತಪ್ಪೆಂದು ತಿಳಿದ ಮೇಲೂ ದುಷ್ಯಂತನು ಹಾಗೆ ಪಶ್ಚಾತ್ತಾಪ ದಗ್ಧನಾಗದಿದ್ದರೆ ಆತನ ಸೌಜನ್ಯವು ಪ್ರಕಟವಾಗುತ್ತಿರಲಿಲ್ಲ. ಆದುದರಿಂದ ಆತನ ವಿರಹ ದುಃಖಕ್ಕೆ ಪಶ್ಚಾತ್ತಾಪವು ಕಾರಣವೇ ಹೊರತು ಸ್ತ್ರೀವ್ಯಾಮೋಹವಲ್ಲ.

ಆಶ್ರಮದ ಬಾಲಿಕೆಯರು ಮಾತನಾಡುತ್ತಿದ್ದುದನ್ನು ದುಷ್ಯಂತನು ಹೊಂಚಿಕೇಳಿದುದೂ, ಮಾಢವ್ಯನನ್ನು ರಾಜಧಾನಿಗೆ ಕಳುಹಿಸಿದಾಗ ಆತ ನೊಡನೆ ಶಕುಂತಲಾವೃತ್ತಾಂತವನ್ನು ಅಪಲಾಪಮಾಡಿದುದೂ ತಪ್ಪೆಂದು ಮತ್ತೆ ಕೆಲವರು ದುಷ್ಯಂತನ ಮೇಲೆ ದೋಷಾರೋಪಣೆ ಮಾಡುವರು. ಸ್ತ್ರೀಯರಿದಿರಿಗೆ ಅಕಸ್ಮಾತ್ತಾಗಿ ನುಗ್ಗಿಹೋಗುವುದು ಅಸಭ್ಯವೆಂದು ತೋರುವುದರಿಂದಲೂ, ಚಪಲನಾದ ಮಾಢವ್ಯನು ಅಂತಃಪುರದಲ್ಲಿ, ಸಿಕ್ಕಿ ದಂತೆ ಮಾತನಾಡಿ ಅಂತಃಕಲಹಗಳನ್ನು ಎಬ್ಬಿಸದಿರಲೆಂದು ದುಷ್ಯಂತನು ಹಾಗೆ ಹೇಳಿದುದು ತಪ್ಪಲ್ಲವೆಂದು ತೋರುವುದರಿಂದಲೂ ಈ ಆಕ್ಷೇಪಣೆ ಗಳನ್ನು ಗಮನಿಸಬೇಕಾಗಿಲ್ಲ.

**ಶಕುಂತಲೆ**:—ಈಗ ಕಥಾನಾಯಕಿಯಾದ ಶಕುಂತಲೆಯ ಗುಣಾ ದಿಗಳನ್ನು ಪರಿಶೀಲಿಸೋಣ. ಆಕೆಯು ರಾಜರ್ಷಿಯಾದ ವಿಶ್ವಾಮಿತ್ರ ನಿಗೂ ಅಪ್ಸರಸ್ತ್ರೀಯಾದ ಮೇನಕೆಗೂ ಔರಸಪುತ್ರಿ; ಕಣ್ವ ಮಹರ್ಷಿ ಗಳಿಂದ ಪಾಲಿತಳಾದವಳು. ಕಣ್ವರಿಗೆ ಆಕೆಯು ಜೀವಿತ ಸರ್ವಸ್ವಳು; ಪ್ರಾಣಸಮಾನಳು. ಕಥಾ ಪ್ರಾರಂಭ ಸಮಯದಲ್ಲಿ ಶಕುಂತಲೆಗೆ ಯೌವ ನವು ಅಂಕುರಿಸುತ್ತಿದ್ದಿತು. ಆಕೆಯು ಅಮಾನುಷವಾದ ಸೌಂದರ್ಯದಿಂದ ಶೋಭಿಸುತ್ತಿದ್ದಳು. ವಲ್ಕಲವನ್ನು ಧರಿಸಿದ್ದರೂ ಆಕೆಯು ಮನೋಜ್ಞ ಳಾಗಿಯೇ ಇದ್ದಳು; ಪಲ್ಲವಾಧರೆ, ಲತಾಂಗಿ. ಆಕೆಯ ಅನುಪಮ ಸೌಂದರ್ಯವನ್ನು ನೋಡಿ ಆ ಸ್ತ್ರೀರತ್ನದ ಸೃಷ್ಟಿಕ್ರಮವೇ ಬೇರೆಯಾಗಿರ ಬೇಕೆಂದು ಊಹಿಸುವಂತಿದ್ದಿತು.

ಬಾಹ್ಯ ಸೌಂದರ್ಯಮಾತ್ರದಿಂದಲೇ ಸ್ತ್ರೀಯು ಶೋಭಿಸಲಾರಳು. ಶಕುಂತಲೆಯು ಬಹುಗುಣಭೂಷಿತೆ. ಇದೇ ವಿಷಯವನ್ನೇ ಕಣ್ವ ಮಹ ರ್ಷಿಗಳು "ಶಕುಂತಲೆಯನ್ನು ಸತ್ಕ್ರಿಯಾಮೂರ್ತಿ ಎಂದು ತಿಳಿದಿರು

ವೆನು" ಎಂದು ಒಂದು ವಾಕ್ಯದಿಂದ ತಿಳಿಸಿರುವರು. ಆಕೆಯಲ್ಲಿ ಪತಿ ಪ್ರೇಮವೂ ಪಾತಿವ್ರತ್ಯವೂ ಚೆನ್ನಾಗಿ ಕಂಡುಬರುವುವು. ದುಷ್ಯಂತನು ರಾಜಧಾನಿಗೆ ತೆರಳಲು ಬಹಳ ಚಿಂತೆಗೆ ಒಳಗಾಗಿ, ದೂರ್ವಾಸರು ಬಂದಿದ್ದುದನ್ನೂ ಸಹ ಗಮನಿಸದೆ ಇದ್ದುದರಿಂದ, ಶಾಪಕ್ಕೆ ಗುರಿಯಾದಳು. ಇದರಿಂದ ಆಕೆಯ ಗಾಢಾನುರಾಗವು ಸ್ಪಷ್ಟವಾಗಿ ತೋರುವುದು. ಪಾತಿವ್ರತ್ಯದ ವಿಷಯದಲ್ಲಿ ದುಷ್ಯಂತನು ಸಂಶಯಿಸಲು, ರೋಷಗೊಂಡು "ಅನಾರ್ಯನೆ" ಎಂದು ಆತನನ್ನು ಸಂಬೋಧಿಸಿರುವಳು. ಈ ರೋಷವು ನಿರಪರಾಧಿತ್ವಜ್ಞಾನಮೂಲವಾದುದೆಂದು ಚೆನ್ನಾಗಿ ತಿಳಿದುಬರುವುದು. ಪತಿಯಿಂದ ಪರಿತ್ಯಕ್ತಳಾದ ಬಳಿಕ ಮಾರೀಚಾಶ್ರಮದಲ್ಲಿ ಮಲಿನ ವಸ್ತ್ರಗಳನ್ನು ಧರಿಸಿ, ಕೇಶಸಂಸ್ಕಾರ ಅಂಗರಾಗಾದಿಗಳನ್ನು ತ್ಯಜಿಸಿ ವ್ರತನಿಷ್ಠಳಾಗಿದ್ದುಕೊಂಡಿರುವಳು. ತನಗೆ ಉಂಟಾದ ಕಷ್ಟಕ್ಕೆ ತನ್ನ ಪುರಾಕೃತ ದುಷ್ಕರ್ಮವೇ ಕಾರಣವಾಗಿದ್ದಿತೆಂದು ಹೇಳುವುದರ ಮೂಲಕ ದುಷ್ಯಂತನನ್ನು ಸಮಾಧಾನಪಡಿಸಲು ಯತ್ನಿಸುವಳು.

ಸ್ತ್ರೀಜನಕ್ಕೆ ಭೂಷಣಪ್ರಾಯವಾದ ಲಜ್ಜಾಗುಣವು ಶಕುಂತಲೆಯಲ್ಲಿ ಚೆನ್ನಾಗಿ ಕಂಡುಬರುವುದು. ನಾಯಿಕಾ ನಾಯಕರಿಗೆ ಪರಸ್ಪರಾನುರಾಗವು ತಲೆದೋರಿದ ಮೇಲೂ, ನಾಯಕನು ತನ್ನನ್ನು ಮಾತನಾಡಿಸಿದಾಗಲೂ, ಶಕುಂತಲೆಯ ಬಾಯಿಂದ ಪ್ರತ್ಯುತ್ತರ ರೂಪವಾಗಿ ಒಂದು ಮಾತೂ ಹೊರಟಿಲ್ಲ. ತಟಲ್ಲತೆಯು ಭೂಮಿಯಲ್ಲಿ ಹೇಗೆ ಹುಟ್ಟೀತೆಂದು ದುಷ್ಯಂತನು ಶಕುಂತಲೆಯ ಸೌಂದರ್ಯವನ್ನು ಶ್ಲಾಘಿಸಿದಾಗ ಆಕೆಯು ಲಜ್ಜೆಯಿಂದ ತಲೆಯನ್ನು ಬಗ್ಗಿಸಿಕೊಂಡು ನಿಲ್ಲುವಳು; ತನ್ನನ್ನು (ಶಕುಂತಲೆಯನ್ನು) ಅನುರೂಪ ವರನಿಗೆ ಕೊಡಬೇಕೆಂದು ಕಣ್ವರಿಗೆ ಉದ್ದೇಶವಿರುವುದೆಂದು ಪ್ರಿಯಂವದೆಯು ತಿಳಿಸಿದಾಗ ಲಜ್ಜೆಯಿಂದ ಆ ಸ್ಥಳವನ್ನು ಬಿಟ್ಟು ಹೊರಟು ಹೋಗಲು ಯತ್ನಿಸುವಳು. ಯಜ್ಞ ಕರ್ಮವು ಮುಗಿದ ಬಳಿಕ ದುಷ್ಯಂತನು ಲತಾಮಂಟಪದ ಸಮೀಪಕ್ಕೆ ಬಂದು ಅನಸೂಯೆಯಿಂದ ಪ್ರಾರ್ಥಿತನಾಗಿ ಶಿಲಾಪೀಠದಲ್ಲಿ ಕುಳಿತುಕೊಳ್ಳಲು, ಶಕುಂತಲೆಯು ಲಜ್ಜಾಯುಕ್ತಳಾಗಿ ನಿಂತಿರುವಳು. ದುಷ್ಯಂತನಲ್ಲಿ ಅನುರಕ್ತಳಾಗಿ ಕೃಶಳಾಗುತ್ತಿದ್ದಾಗಲೂ ಸಹ ತನ್ನ ಸಖಿಯರಿಗೆ ಕಾರಣವನ್ನು ಹೇಳಲು

ಶಕುಂತಲೆಗೆ ಬಲು ನಾಚಿಕೆ. ತನ್ನ ಪತಿಯು ಸಂಗಡ ಪುತ್ರನನ್ನು ಕರೆದು ಕೊಂಡು ಅದಿತಿ–ಮಾರೀಚರ ಸನ್ನಿಧಿಗೆ ಹೋಗಲು ನಾಚುವಳು.

ಸ್ತ್ರೀಯರಲ್ಲಿ ಭೀರುತ್ವವೂ ಒಂದು ಸುಗುಣವೆಂಬ ಭಾವನೆಯು ಪೌರಸ್ತ್ಯರಲ್ಲಿ ನೆಲೆಗೊಂಡಿರುವುದು. ಶಕುಂತಲೆಯಲ್ಲಿ ಭೀರುತ್ವವು ಚೆನ್ನಾಗಿ ಕಂಡು ಬರುವುದು. ದೇಹ ಸೌರಭಮುಗ್ಧವಾದ ಒಂದು ಭ್ರಮರವು ತನ್ನನ್ನು ಬಳಸಿಕೊಂಡು ಬರಲು ಶಕುಂತಲೆಯು ಹೆದರುವಳು. ಗೌತಮಿಯು ಮಾತನಾಡಿದುದನ್ನು ಕೇಳಿ "ಈ ಉಪನ್ಯಾಸವೇನು?" ಎಂದು ದುಷ್ಯಂತನು ಹೇಳಲು "'ಉಪನ್ಯಾಸ'ವೆಂಬ ಮಾತು ಬೆಂಕಿಯಂತಿರುವುದು" ಎಂದು ಹೆದರುವಳು. ಶಾರ್ಙ್ಗರವನು ಗದರಿಸಲು ಶಕುಂತಲೆಯು ಭೀತಿಯಿಂದ ನಡುಗುವಳು.

ಶಕುಂತಲೆಯಲ್ಲಿ ಕಂಡುಬರುವ ಮತ್ತೊಂದು ಕೋಮಲ ಗುಣವು ಆಕೆಯ ಪ್ರಕೃತಿ ಸ್ನೇಹವು. ಆಶ್ರಮದ ತರುಲತೆಗಳ ವಿಷಯದಲ್ಲಿ ಆಕೆಗೆ ಸೋದರ ಪ್ರೇಮವು ಕಂಡುಬರುವುದು. ಒಂದು ನವಮಾಲಿಕಾ ಲತೆಗೆ "ವನಜ್ಯೋತ್ಸ್ನೆ" ಎಂದೂ, ಒಂದು ಜಿಂಕೆಯ ಮರಿಗೆ "ದೀರ್ಘಾಪಾಂಗ" ಎಂದೂ ಹೆಸರನ್ನಿಡುವಳು. ವನಜ್ಯೋತ್ಸ್ನೆಯು ಶಕುಂತಲೆಗೆ ಲತಾಭಗಿನಿ; ದೀರ್ಘಾಪಾಂಗವು ಸಾಕುಮಗು. ನವಮಾಲಿಕೆಯನ್ನು ಸಹಕಾರಕ್ಕೆ ಸ್ವಯಂವರ ವಧುವಾಗಿ ನಿಯಮಿಸುವಳು. ತಪೋವನ ತರುಗಳಿಗೆ ನೀರೆರೆಯದೆ ಶಕುಂತಲೆಯು ತನ್ನ ದಾಹವನ್ನು ಶಾಂತಿ ಮಾಡಿಕೊಳ್ಳುತ್ತಿರಲಿಲ್ಲ; ಅಲಂಕಾರಮಾಡಿಕೊಳ್ಳಬೇಕೆಂದು ಪ್ರೀತಿಯಿದ್ದರೂ, ಚಿಗುರುಗಳನ್ನು ಕೊಯ್ದರೆ ತರುಲತೆಗಳಿಗೆ ನೋವಾದೀತೆಂಬ ಭಯದಿಂದ ಅವುಗಳನ್ನು ಕೊಯ್ಯುತ್ತಿರಲಿಲ್ಲ; ತರುಲತೆಗಳಿಗೆ ಪುಷ್ಪೋದ್ಗಮವಾದರೆ ಶಕುಂತಲೆಗೆ ಬಹಳ ದೊಡ್ಡ ಉತ್ಸವ ಸಮಯವಾಗುತ್ತಿದ್ದಿತು. ಜಿಂಕೆಯ ಮರಿಯು ಅನುಭವ ಸಾಲದೆ ಕುಶಾಗ್ರದಿಂದ ತನ್ನ ಮುಸುಡಿಯನ್ನು ಗಾಯಮಾಡಿಕೊಂಡಾಗ ಅದಕ್ಕೆ ವ್ರಣಹರಣ ತೈಲವನ್ನು ಸವರಿ ಗಾಯಗಳನ್ನು ವಾಸಿಮಾಡುವಳು; ಅದಕ್ಕೆ ನೀವಾರ ಧಾನ್ಯವನ್ನು ತಿನ್ನಿಸುವಳು. ಆಶ್ರಮದ ಒಂದು ಜಿಂಕೆಯು ಪೂರ್ಣ ಗರ್ಭಿಣಿಯಾಗಿರಲು ಅದಕ್ಕೆ ಸುಖಪ್ರಸವವಾದುದನ್ನು ಮರೆಯದೆ ತನಗೆ ತಿಳಿಸಬೇಕೆಂದು ಕಣ್ವರನ್ನು ಪ್ರಾರ್ಥಿಸುವಳು.

ಪ್ರೀತಿಯಿಂದ ಪ್ರೀತಿಯು ಹುಟ್ಟುವುದು ಸಹಜ. ಆಶ್ರಮದ ಗಿಡ ಮರಗಳ ವಿಷಯದಲ್ಲಿಯೂ ಪ್ರಾಣಿಗಳ ವಿಷಯದಲ್ಲಿಯೂ ಶಕುಂತಲೆಗೆ ಬಲು ಪ್ರೇಮವಿದ್ದುದರಿಂದ ಆಕೆಯು ಪತಿಗೃಹಕ್ಕೆ ತೆರಳುವ ಸಮಯ ದಲ್ಲಿ ಹರಿಣಗಳು ದರ್ಭೆಯ ಕವಳಗಳನ್ನು ನೆಲದ ಮೇಲೆ ಬೀಳಿಸಿಬಿಟ್ಟಿ ದ್ದುವು; ನವಿಲುಗಳು ತಮ್ಮ ಕುಣಿತವನ್ನು ತ್ಯಜಿಸಿದ್ದುವು; ಲತೆಗಳು ಕಣ್ಣೀರನ್ನು ಬಿಡುತ್ತಿರುವಂತೆ ತಮ್ಮ ಹಣ್ಣೆಲೆಗಳನ್ನು ಉದುರಿಸುತ್ತಿ ದ್ದುವು. ತನ್ನ ಪೋಷಕಿಯು ಆಶ್ರಮವನ್ನು ಬಿಟ್ಟು ಹೋಗುವಳಲ್ಲಾ ಎಂಬ ದುಃಖದಿಂದ ಹರಿಣಶಿಶುವು ಶಕುಂತಲೆಯ ವಸ್ತ್ರವನ್ನು ಹಿಡಿದು ನಿಲ್ಲಿಸಲು ಯತ್ನಿಸುವುದು; ಪೂರ್ಣಗರ್ಭಿಣಿಯಾದ ಹರಿಣಿಯು ಶಕುಂ ತಲೆಯನ್ನು ನೋಡುತ್ತ ಮೆಲ್ಲ ಮೆಲ್ಲಗೆ ತಿರುಗುತ್ತಿರುವುದು.

ತಪೋವನದ ತರುಲತೆಗಳ ವಿಷಯದಲ್ಲಿಯೂ ಪ್ರಾಣಿಗಳ ವಿಷ ಯದಲ್ಲಿಯೂ ಇಷ್ಟು ಪ್ರೀತಿಯನ್ನಿಟ್ಟಿದ್ದ ಶಕುಂತಲೆಗೆ ತನ್ನ ಪೋಷಕರ ವಿಷಯದಲ್ಲಿಯೂ ಸಖಿಯರ ವಿಷಯದಲ್ಲಿಯೂ ಅಪಾರ ಪ್ರೇಮವು ಕಂಡುಬರುವುದು ಸ್ವಾಭಾವಿಕವೇ. ಚಿಕ್ಕಂದಿನಿಂದಲೂ ತನ್ನನ್ನು ಸಾಕಿ ಸಲಹಿದ ಕಣ್ವರು ಆಗಲೇ ತಪಸ್ಸಿನಿಂದ ಕೃಶರಾಗಿದ್ದುದರಿಂದ ತನ್ನ ಅಗಲಿಕೆಗಾಗಿ ಉತ್ಕಂಠಿತರಾಗಕೂಡದೆಂದು ಅವರನ್ನು ಪ್ರಾರ್ಥಿಸು ವಳು. ತಂದೆಯವರ ಸನ್ನಿಧಿಯನ್ನು ಬಿಟ್ಟು ದೇಶಾಂತರದಲ್ಲಿ ಹೇಗೆ ತಾನೆ ಜೀವಧಾರಣ ಮಾಡಿಕೊಂಡಿರುವುದು? ಎಂದು ಕಾತರಿಸುವಳು. ದೈವಯೋಗದಿಂದ ಪತಿಯ ಸಮಾಗಮವುಂಟಾದಾಗ, ಆ ಶುಭವರ್ತ ಮಾನವನ್ನು ಕಣ್ವರಿಗೆ ಹೇಳಿಕಳುಹಿಸಬೇಕಲ್ಲ? ಎಂದು ಮನಸ್ಸಿನಲ್ಲಿ ಎಣಿಸುತ್ತಿರುವಳು. ತನ್ನ ಸಖಿಯರ ವಿಷಯದಲ್ಲಿಯೂ ಶಕುಂತಲೆಗೆ ಬಹಳ ಪ್ರೀತಿಯು ಕಂಡುಬರುವುದು. ಅವರೊಡನೆ ಮಾತನಾಡುವಾಗ ಆಕೆಯ ಸರಸ ಸ್ನೇಹವು ಚೆನ್ನಾಗಿ ತೋರುವುದು. ಅವರನ್ನು ಬಿಟ್ಟು ಹೋಗಲು ಶಕುಂತಲೆಗೆ ಬಹಳ ವ್ಯಸನವಾಗಿ "ಸಖೀ ಜನರು ಇಲ್ಲಿಂ ದಲೇ ಹಿಂದಿರುಗುವರೇನು?" ಎಂದು ಕಣ್ವರನ್ನು ಪ್ರಶ್ನಿಸುವಳು.

**ಕಣ್ವರು**—ಕುಲಪತಿಗಳು; ಎಂದರೆ — ಬಹು ಶಿಷ್ಯರಿಗೆ ಗುರುಗಳಾ ಗಿಯೂ ಮುನಿಗಳಲ್ಲಿ ಅಗ್ರಣಿಗಳಾಗಿಯೂ ವ್ರತ ಯಜ್ಞಾದಿ ಕರ್ಮಾಧ್ಯ

ರಾಗಿಯೂ ಇದ್ದವರು. ತಪಶ್ಚರಣ ಪ್ರವಣತೆಯ ದೆಸೆಯಿಂದ ಅವರ ಶರೀರವು ಕೃಶವಾಗಿದ್ದಿತು. ಅವರ ಆಶ್ರಮದಲ್ಲಿ ವೈಖಾನಸರೂ, ಗೌತಮಿಯಂತಹ ತಾಪಸ ಸ್ತ್ರೀಯರೂ, ಶಕುಂತಲೆ ಪ್ರಿಯಂವದೆ ಅನಸೂಯೆಯರಂತಹ ಬಾಲಕಿಯರೂ, ಋಷಿಪುತ್ರರೂ, ಶಾರ್ಙ್ಗರವ ಶಾರದ್ವತರಂತಹ ಶಿಷ್ಯರುಗಳೂ ವಾಸಿಸುತ್ತಾ ಆಶ್ರಮಯೋಗ್ಯವಾದ ಕಾರ್ಯಗಳಲ್ಲಿ ಪ್ರವರ್ತರಾಗಿದ್ದರು. ಕರುಣಾಶಾಲಿಗಳಾದ ಕಣ್ವರು ಇವರುಗಳ ಯೋಗಕ್ಷೇಮದಲ್ಲಿ ಬಹಳ ನಿರತರಾಗಿದ್ದರು; ಆಶ್ರಮವೃಕ್ಷಗಳನ್ನು ನೋಡಿಕೊಳ್ಳಲು ತಮ್ಮ ಪ್ರಿಯ ಪುತ್ರಿಯಾದ ಶಕುಂತಲೆಯನ್ನೂ ಇತರ ಬಾಲಿಕೆಯರನ್ನೂ ನಿಯಮಿಸಿದ್ದರು; ಆಶ್ರಮದಲ್ಲಿದ್ದ ಮೃಗಪಕ್ಷಿಗಳು ನಿರ್ಬಾಧಿತವಾಗಿದ್ದುವು; ಆಶ್ರಮದ ಬಾಲಿಕೆಯರಿಗೆ ವಿದ್ಯಾಬುದ್ಧಿಗಳನ್ನು ಕಲಿಸುತ್ತಿದ್ದರು. ಈ ತೆರನಾದ ಶಿಕ್ಷಣವು ದೊರೆಯುತ್ತಿದ್ದುದರಿಂದಲೇ ಪ್ರಿಯಂವದಾದಿಗಳಿಗೆ ಇತಿಹಾಸ ನಿಬಂಧಾದಿಗಳ ಜ್ಞಾನವೂ, ಚಿತ್ರ ರಚನಾನುಭವವೂ ಇರುತ್ತಿದ್ದುವು. ಯೋಗ್ಯ ವಯಸ್ಕರಾದ ಮೇಲೆ ಅವರುಗಳನ್ನು ಅನುರೂಪರಾದ ವರರುಗಳಿಗೆ ಪ್ರದಾನಮಾಡುತ್ತಿದ್ದರು. ಹಾಗೆ ಪ್ರದಾನ ಮಾಡುವವರೆಗೂ ತಮ್ಮ ಕರ್ತವ್ಯವು ಪೂರ್ತಿಯಾಯಿತೆಂದು ಭಾವಿಸುತ್ತಿರಲಿಲ್ಲ; ಮತ್ತೊಬ್ಬರ ದ್ರವ್ಯವನ್ನು ತಮ್ಮ ಬಳಿಯಲ್ಲಿಟ್ಟುಕೊಂಡಿರುವ ವರೆಗೂ ಅದನ್ನು ತನ್ನ ವಸ್ತುವಿಗಿಂತಲೂ ಹೇಗೆ ಎಚ್ಚರಿಕೆಯಿಂದ ಕಾಪಾಡುತ್ತಿರುವುದು ಧರ್ಮವೋ ಹಾಗೆಯೇ ಅನ್ಯರ ಒಡವೆಯಾದ ಕನ್ಯೆಯರನ್ನೂ ಪತಿಗೃಹಕ್ಕೆ ಕಳುಹಿಸುವ ವರೆಗೂ ಬಹಳ ಚೆನ್ನಾಗಿ ರಕ್ಷಿಸುತ್ತಿರಬೇಕೆಂಬುದು ಕಣ್ವರ ಅಭಿಪ್ರಾಯವು.

ಕಣ್ವರು ನಿತ್ಯಬ್ರಹ್ಮಚಾರಿಗಳಾದರೂ ಮೇನಕೆಯಿಂದ ಪರಿತ್ಯಕ್ತಳಾಗಿದ್ದ ಶಕುಂತಲೆಯನ್ನು ತಮ್ಮ ಆಶ್ರಮಕ್ಕೆ ತೆಗೆದುಕೊಂಡು ಬಂದು ಪೋಷಿಸಿದರು. ಅವರಿಗೆ ಶಕುಂತಲೆಯು ಜೀವಿತ ಸರ್ವಸ್ವಳು; ಪ್ರಾಣ ಸಮಾನಳು; ಆಕೆಗೆ ಸಂಭವಿಸುವುದಕ್ಕಿದ್ದ ಪ್ರತಿಕೂಲದೈವವನ್ನು ಶಮನ ಮಾಡುವುದಕ್ಕಾಗಿ ದೂರದಲ್ಲಿದ್ದ ಸೋಮತೀರ್ಥಕ್ಕೆ ಪ್ರಯಾಣ ಮಾಡಿದರು. ಆಕೆಯನ್ನು ಪತಿಗೃಹಕ್ಕೆ ಕಳುಹಿಸಿಕೊಡುವಾಗ ವಸ್ತ್ರಾಭರಣಗಳನ್ನು ಕೊಟ್ಟರು. ಆಕೆಯು ಆಶ್ರಮವನ್ನು ಬಿಟ್ಟುಹೋಗುವಳಲ್ಲಾ

ಎಂಬ ಚಿಂತೆಯಿಂದ ಕಣ್ವರ ಕಂಠವು ಗದ್ಗದಿತವಾಯಿತು; ದೃಷ್ಟಿಯು ಮಂದವಾಯಿತು; ಪುತ್ರೀಸ್ನೇಹವಶದಿಂದ ಅವರಿಗೆ ಪಾರವಶ್ಯವುಂಟಾಯಿತು. ಶಕುಂತಲೆಯು ಹಿಂದೆ ಪರ್ಣಶಾಲೆಯ ಬಾಗಿಲ ಬಳಿಯಲ್ಲಿ ಎರಚಿದ್ದ ನೀವಾರ ಬಲಿಯು ಮೊಳೆತಿದ್ದುದನ್ನು ನೋಡಿ 'ಶಕುಂತಲಾ ವಿಯೋಗ ದುಃಖವನ್ನು ಹೇಗೆ ಸಹಿಸುವುದೋ' ಎಂದು ಅವರು ಹಂಬಲಿಸಿರುವುದನ್ನು ನೋಡಿದರೆ ಕಣ್ವರ ಪುತ್ರೀ ವಾತ್ಸಲ್ಯವು ಎಷ್ಟು ಅಪಾರವಾದುದು ಎಂದು ಸ್ಪಷ್ಟವಾಗುವುದು

ಕಣ್ವರು ತಪಃಪ್ರಭಾವಶಾಲಿಗಳು; ಸಿದ್ಧಿಸಮನ್ವಿತರು. ಇವರಿಗೆ ಭವಿಷ್ಯಜ್ಞಾನವೂ ಇದ್ದಿತು; ಆದುದರಿಂದಲೇ ಶಕುಂತಲೆಗೆ ಮುಂದೆ ಸಂಭವಿಸುವುದಕ್ಕಿದ್ದ ಅಶುಭವನ್ನು ತಪ್ಪಿಸುವುದಕ್ಕಾಗಿ ಶಾಂತಿಕರ್ಮವನ್ನು ಕೈಕೊಂಡರು. ಅವರು ಆಶ್ರಮದಲ್ಲಿದ್ದಾಗ ಬಾಧೆಯನ್ನುಂಟು ಮಾಡಲು ಯಾವ ರಾಕ್ಷಸರಿಗೂ ಧೈರ್ಯವಿರಲಿಲ್ಲ. ಕಣ್ವರು ತಮ್ಮ ತಪೋಮಾಹಾತ್ಮ್ಯದಿಂದ ವನಸ್ಪತಿಗಳ ಮೂಲಕ ವಸ್ತ್ರಾಭರಣಗಳನ್ನು ಪಡೆದು ಶಕುಂತಲೆಗೆ ಕೊಡಿಸಿದರು. ಶಕುಂತಲೆಯು ದುಷ್ಯಂತನನ್ನು ವರಿಸಿದ್ದ ವಿಷಯವನ್ನು ಅಶರೀರವಾಣಿಯು ಕಣ್ವರಿಗೆ ತಿಳಿಸಿತು. ಮಾರೀಚಾಶ್ರಮದಲ್ಲಿ ದುಷ್ಯಂತನು ಶಕುಂತಲೆಯನ್ನು ಪುನಃ ಪರಿಗ್ರಹಿಸಿದ ವೃತ್ತಾಂತವು ಕಣ್ವರ ತಪಃಪ್ರಭಾವದಿಂದ ಪ್ರತ್ಯಕ್ಷವಾಗಿದ್ದಿತು.

ಕಣ್ವರು ಆಶ್ರಮವಾಸಿಗಳಾಗಿದ್ದರೂ ಅವರಿಗೆ ಅತ್ಯುತ್ಕೃಷ್ಟವಾದ ಲೌಕಿಕ ವ್ಯವಹಾರಜ್ಞಾನವಿದ್ದಿತು. ಅವರು ದುಷ್ಯಂತನಿಗೆ ಹೇಳಿಕಳುಹಿಸಿದ ಸಂದೇಶವನ್ನೂ, ಶಕುಂತಲೆಗೆ ಬೋಧಿಸಿದ ಬುದ್ಧಿವಾದವನ್ನೂ ಪರಿಶೀಲಿಸಿದರೆ ಈ ವಿಷಯವು ಗೊತ್ತಾಗುವುದು. ದುಷ್ಯಂತನ ಸಂದೇಶದಲ್ಲಿ ಕಣ್ವರ ಆತ್ಮಗೌರವಬುದ್ಧಿಯೂ, ಗಾಂಭೀರ್ಯವೂ, ಹಿತವಾದವೂ ತುಂಬಿರುವುವು. ಕಣ್ವರು ತಮ್ಮ ಪುತ್ರಿಗೆ ಹೇಳಿರುವ ಬುದ್ಧಿವಾದಕ್ಕಿಂತಲೂ ಉತ್ತಮವಾದುದನ್ನು ಮತ್ತೆ ಯಾವ ತಂದೆಯಾದರೂ ತನ್ನ ಮಗಳಿಗೆ ಹೇಳಲು ಸಾಧ್ಯವಿಲ್ಲ. ಮದುವೆಯಾದ ಮಗಳು ತಂದೆಯ ಮನೆಯಲ್ಲಿರುವುದು ಲೋಕಸಮ್ಮತವಲ್ಲೆಂಬುದನ್ನು ತಿಳಿದಿದ್ದ ಕಣ್ವರು, ಸೋಮತೀರ್ಥದಿಂದ ಹಿಂದಿರುಗಿದ ಸ್ವಲ್ಪ ಹೊತ್ತಿನಲ್ಲಿಯೇ ಶಕುಂ

ತಲೆಯನ್ನು ಪತಿಗೃಹಕ್ಕೆ ಕಳುಹಿಸಿಕೊಟ್ಟರು. ಪುಂಸವನಾದಿ ಕರ್ಮ ಗಳು ಯಥಾವಿಧಿಯಾಗಿ ನಡೆಯಲು ಪ್ರತಿಬಂಧಕವಿಲ್ಲದಿರಲಿ ಎಂಬುದೂ ಕಣ್ವರ ಮತ್ತೊಂದು ಉದ್ದೇಶವಾಗಿದ್ದಂತೆ ತೋರುವುದು.

**ಪ್ರಿಯಂವದಾನಸೂಯೆಯರು:**— ಸ್ಥೂಲವಾಗಿ ನೋಡಿದರೆ ಈ ಇಬ್ಬರು ಸಖಿಯರಲ್ಲೂ ಒಂದೇ ವಿಧವಾದ ಗುಣಗಳು ಇರುವಂತೆ ಕಂಡುಬರುವುವು. ಇವರು ಸಮಾನ ವಯೋರೂಪವುಳ್ಳವರು. ಇವ ರಿಬ್ಬರಿಗೂ ಕಣ್ವರ ವಿಷಯದಲ್ಲಿ ಪಿತೃವಾತ್ಸಲ್ಯವು ತೋರಿಬರುವುದು. ಅವರನ್ನು "ತಂದೆಗಳಾದ ಕಣ್ವರು", "ತಂದೆಯವರಾದ ಕಾಶ್ಯಪರು" ಎಂದು ಸೂಚಿಸುವರು. ಇವರಿಬ್ಬರಿಗೂ ಇತಿಹಾಸ ನಿಬಂಧಗಳ ಜ್ಞಾನ ವೂ, ಚಿತ್ರರಚನಾ ಪರಿಶ್ರಮವೂ ಇದ್ದುವು. ಇವರುಗಳಿಗೆ ಆಶ್ರಮದ ತರುಲತೆಗಳ ವಿಷಯದಲ್ಲಿಯೂ ಪ್ರಾಣಿಗಳ ವಿಷಯದಲ್ಲಿಯೂ ಬಹಳ ಪ್ರೀತಿಯೂ, ಅತಿಥಿ ಸತ್ಕಾರ ವಿಷಯದಲ್ಲಿ ಆದರವೂ ಇದ್ದುವು. ಇಬ್ಬರೂ ಮೃದುಮಧುರವಾಗಿ ಮಾತನಾಡುತ್ತಿದ್ದರು; ಶಕುಂತಲೆಯ ವಿಷಯದಲ್ಲಿ ಬಹಳ ಪ್ರೀತಿಯನ್ನು ತೋರಿಸುತ್ತಿದ್ದರು; ಆಕೆಗೆ ಅನುರಾಗ ವಶದಿಂದ ವ್ಯಥೆಯುಂಟಾಗಿರಲು ಬಹಳ ಆದರದಿಂದ ಶಿಶಿರೋಪಚಾರವನ್ನು ಮಾಡಿದರು; ದೂರ್ವಾಸರಿಂದ ಶಾಪವುಂಟಾದಾಗ ಅದನ್ನು ಹೋಗ ಲಾಡಿಸಲು ಬಹಳವಾಗಿ ಶ್ರಮಪಟ್ಟರು; ಶಕುಂತಲೆಯನ್ನು ಆಕೆಯ ಪತಿಗೃಹಕ್ಕೆ ಕಳುಹಿಸುವಾಗ ಆಕೆಗೆ ಆಭರಣಗಳಿಂದ ಅಲಂಕಾರಮಾಡಿ ದರು; ಶಕುಂತಲೆಯು ಮುಂದೆ ಹೊರಟುದನ್ನು ನೋಡಿ ಕಾಶ್ಯಪರನ್ನು ಕುರಿತು "ತಂದೆಯವರೇ! ಶಕುಂತಲಾವಿರಹಿತವಾಗಿ ಬರಿದಾದಂತೆ ತೋರುವ ತಪೋವನವನ್ನು ಪ್ರವೇಶಿಸುವುದು ಹೇಗೆ?" ಎಂದು ದುಃಖಾ ತಿರೇಕದಿಂದ ಪ್ರಶ್ನಿಸಿರುವರು. ಹೀಗೆ ಕೆಲವು ವಿಷಯಗಳಲ್ಲಿ ಈ ಸಖಿ ಯರುಗಳಿಗೆ ಪರಸ್ಪರ ಸಾಮ್ಯವು ಕಂಡುಬರುತ್ತಿದ್ದರೂ ಇನ್ನು ಕೆಲವು ವಿಷಯಗಳಲ್ಲಿ ಇವರುಗಳಲ್ಲಿ ಪ್ರಭೇದಗಳು ಸ್ಪಷ್ಟವಾಗಿ ಕಂಡುಬರು ವುವು.

ಶಕುಂತಲೆಯ ವಿಷಯದಲ್ಲಿ ಪ್ರಿಯಂವದೆಗಿದ್ದ ಪ್ರೀತಿಗಿಂತಲೂ ಅನಸೂಯೆಯದು ಗಾಢವಾಗಿದ್ದಿತು. ಶಕುಂತಲೆಗೆ ಸ್ವಲ್ಪ ಶ್ರಮವಾ

ದರೂ ಅನಸೂಯೆಗೆ ಸಹಿಸದು; ಆದುದರಿಂದಲೇ, ಆಶ್ರಮದ ವೃಕ್ಷ
ಗಳಿಗೆ ನೀರೆರೆಯಲು ಕಣ್ವರು ಆಕೆಯನ್ನು ನೇಮಿಸಿದ್ದುದನ್ನು ನೋಡಿ
ಅವರಿಗೆ ಶಕುಂತಲೆಯಲ್ಲಿದ್ದುದಕ್ಕಿಂತಲೂ ಆಶ್ರಮದ ತರುಲತೆಗಳ
ಮೇಲೆ ಹೆಚ್ಚು ಪ್ರೀತಿಯಿದ್ದಿತೆಂದು ಊಹಿಸುವಳು. ತನ್ನ ಸಖಿಯು
ವಿರಹವ್ಯಥೆಯನ್ನು ಪಡುತ್ತಿದ್ದಾಗ ಆಕೆಯ ಮನೋರಥವನ್ನು ತ್ವರೆ
ಯಿಂದಲೂ ಗುಟ್ಟಾಗಿಯೂ ಹೇಗೆ ನಡೆಯಿಸಬಹುದೆಂಬ ಯೋಚನೆಯು
ಅನಸೂಯೆಗೆ ಮೊದಲು ಹೊಳೆದಿರುವುದು; ರಾಜರು ಬಹುವಲ್ಲಭಾ
ಪ್ರಿಯರಾದ ಕಾರಣ ಶಕುಂತಲೆಯ ವಿಷಯವಾಗಿ ಬಂಧುಜನರಿಗೆ
ಯಾವ ಬಗೆಯ ದುಃಖವೂ ಉಂಟಾಗದಂತೆ ಅವಳನ್ನು ಆದರಿಸುತ್ತಿರ
ಬೇಕೆಂದು ದುಷ್ಯಂತನನ್ನು ಕೇಳಿಕೊಂಡಿರುವಳು; ರಾಜಧಾನಿಗೆ ಹಿಂದಿ
ರುಗಿದ ಬಳಿಕ ದುಷ್ಯಂತನಿಗೆ ತನ್ನ ಸಖಿಯ ಸ್ಮರಣೆಯು ಬರುವುದೋ
ಇಲ್ಲವೋ ಎಂದು ಸಂದೇಹಿಸಿರುವಳು; ಶಕುಂತಲೆಯ ಯೋಗಕ್ಷೇಮ
ದಲ್ಲಿ ಬಹಳ ನಿರತಳಾಗಿದ್ದುದರಿಂದ ದೂರ್ವಾಸರು ಆಡಿದ ಮಾತು
ಅನಸೂಯೆಯ ಕಿವಿಗೇ ಮೊದಲು ಬಿದ್ದಿರುವುದು. ಕುಪಿತರಾದ
ದೂರ್ವಾಸರಿಗೆ ಅಡ್ಡಬಿದ್ದು ಸಮಾಧಾನಪಡಿಸುವುದಕ್ಕಾಗಿ ಅನಸೂ
ಯೆಯು ಪ್ರಿಯಂವದೆಯನ್ನು ಕಳುಹಿಸಿಕೊಟ್ಟಿರುವಳು; ಶಕುಂತಲೆಯ
ಮನಸ್ಸನ್ನು ಸ್ವಲ್ಪವಾದರೂ ನೋಯಿಸದೆ ಇರುವುದಕ್ಕಾಗಿ ಶಾಪ
ವೃತ್ತಾಂತವನ್ನು ಆಕೆಗೆ ತಿಳಿಸಕೂಡದೆಂದು ಪ್ರಿಯಂವದೆಗೆ ಎಚ್ಚರಿಸಿರು
ವಳು. ದುಷ್ಯಂತನಿಂದ ಪತ್ರಿಕೆಯು ಬಾರದಿದ್ದುದರಿಂದ ತನ್ನ ಸಖಿಗಾಗಿ
ಬಹಳವಾಗಿ ಚಿಂತಿಸುತ್ತಿರುವಳು. ಈ ಚಿಂತೆಯಿಂದ ಅವಳ ಕರ್ತವ್ಯ
ಗಳ ವಿಷಯದಲ್ಲಿಯೂ ಸಹ ಅವಳ ಕೈಕಾಲುಗಳು ಚಲಿಸದಿದ್ದುವು.
ಶಕುಂತಲೆಯು ಪತಿಗೃಹಕ್ಕೆ ಹೋಗುವಾಗ ಆದರದಿಂದ ಆಕೆಗೆ ಕೇಸರ
ಮಾಲಿಕೆಯೊಂದನ್ನು ಕಟ್ಟಿಕೊಡುವಳು. ನವಮಾಲಿಕಾಲತೆಯನ್ನು
ಶಕುಂತಲೆಯು ಸಖಿಯರ ಕೈಗೆ ಒಪ್ಪಿಸಿದಾಗ, ಅನಸೂಯೆಯು ಹೆಚ್ಚಾಗಿ
ಅಳುತ್ತಿದ್ದುದನ್ನು ಕಂಡು ಕಾಶ್ಯಪರು ಅವಳನ್ನು ಅಳಬೇಡವೆಂದು
ಸಮಾಧಾನಪಡಿಸಿರುವರು. ಒಟ್ಟಿನಲ್ಲಿ ನೋಡಿದರೆ ಅನಸೂಯೆಯಲ್ಲಿ
ಸಖೀಸ್ನೇಹಕ್ಕಿಂತಲೂ ಸೋದರ್ಯಪ್ರೀತಿಯು ಚೆನ್ನಾಗಿ ಕಂಡುಬರುವುದು.

ಅನಸೂಯೆಯಲ್ಲಿ ಪ್ರಿಯಂವದೆಗಿಂತಲೂ ಹೆಚ್ಚಾಗಿ ಸಮಯ ಸ್ಫೂರ್ತಿಯೂ ಸಾರಳ್ಯವೂ ಕಂಡುಬರುವುವು. "ತಪಸ್ಸು ವರ್ಧಿಸುತ್ತಿರುವುದೇ?" ಎಂದು ದುಷ್ಯಂತನು ಕೇಳಿದ ಪ್ರಶ್ನೆಗೆ ಉತ್ತರಕೊಟ್ಟಿರುವವಳು ಅನಸೂಯೆಯೇ; ಆಶ್ರಮಕ್ಕೆ ಬಂದ ಅತಿಥಿಗೆ ಸತ್ಕಾರವನ್ನು ಮಾಡಬೇಕೆಂಬ ಭಾವವು ಮೊದಲು ಹೊಳೆದುದೂ ಅವಳಿಗೇ; ದೂರ್ವಾಸರ ಶಾಪಕ್ಕೆ ಪರಿಹಾರವನ್ನು ಸಂಪಾದಿಸಬೇಕೆಂದು ತೋಚಿದುದೂ ಅನಸೂಯೆಗೇ. ಚತುರನೂ, ಗಂಭೀರಾಕಾರನೂ, ಮಧುರಪ್ರಿಯಭಾಷಿಯೂ ಆದ ಅತಿಥಿಯು ಯಾರಾಗಿರಬಹುದೆಂದು ಪ್ರಿಯಂವದೆಯು ಅನಸೂಯೆಯನ್ನು ಗುಟ್ಟಾಗಿ ಕೇಳುತ್ತಿದ್ದಾಗ ಅನಸೂಯೆಯು ಧೈರ್ಯ ತಂದುಕೊಂಡು ದುಷ್ಯಂತನನ್ನೇ ಆತನ ವಿಚಾರವಾಗಿ ಪ್ರಶ್ನೆಮಾಡಿರುವಳು. ಅನಸೂಯೆಯೇ ಶಕುಂತಲೆಯ ಜನನವೃತ್ತಾಂತವನ್ನು ಔಚಿತ್ಯಕ್ಕೆ ಸ್ವಲ್ಪವೂ ಲೋಪವಿಲ್ಲದಂತೆ ಬಹಳ ಗಂಭೀರವಾದ ಮಾತುಗಳಿಂದ ದುಷ್ಯಂತನಿಗೆ ತಿಳಿಸಿರುವಳು.

ಪ್ರಿಯಂವದೆಯು ಸರಸವಾಗಿ ಮಾತನಾಡುವವಳು; ಆದುದರಿಂದಲೇ ಅವಳ ಹೆಸರು ಅವಳ ಗುಣಕ್ಕೆ ತಕ್ಕುದೆಂದು ಶಕುಂತಲೆಯು ಹೇಳಿರುವಳು. ಅವಳ ವಾಕ್ಚಾತುರ್ಯವನ್ನು ಕಂಡೇ ದೂರ್ವಾಸರ ಕೋಪವನ್ನು ಹೋಗಲಾಡಿಸುವ ಕಷ್ಟಕಾರ್ಯದಲ್ಲಿ ಅನಸೂಯೆಯು ಅವಳನ್ನು ತೊಡಗಿಸಿರುವಳು. ನಾಯಿಕೆಯ ವಿಷಯದಲ್ಲಿ ನಾಯಕನಿಗೆ ಅನುರಾಗವು ಅಭಿವೃದ್ಧಿಯಾಗಲು ಪ್ರಿಯಂವದೆಯ ಮಾತುಗಳಿಂದಲೇ ಹೆಚ್ಚು ಫಲವುಂಟಾಗಿರುವುದು. ಶಕುಂತಲೆಯ ಯೌವನವು ವಿಕಸಿಸುತ್ತಿರುವ ವಿಷಯವನ್ನೂ, ಆಕೆಯು ಕೇಸರವೃಕ್ಷದ ಸಮೀಪದಲ್ಲಿದ್ದಾಗ ಲತೆಯಂತೆ ಕೋಮಲವಾಗಿದ್ದುದನ್ನೂ ಸೂಚಿಸುವುದರ ಮೂಲಕವೇ ದುಷ್ಯಂತನ ಲಕ್ಷ್ಯವು ಶಕುಂತಲೆಯಲ್ಲಿ ಚೆನ್ನಾಗಿ ಊರಿರುವುದು. ದುಷ್ಯಂತನು ಅವರಿದಿರಿಗೆ ಕಾಣಿಸಿಕೊಂಡ ಮೇಲೆ ಆತನನ್ನು ಸಾಂದ್ರ ಶೀತಲಚ್ಛಾಯೆಯಲ್ಲಿ ಕುಳಿತುಕೊಳ್ಳುವಂತೆ ಕೇಳಿಕೊಳ್ಳುವಳು. ಅನುರೂಪನಾದ ವರನಿಗೆ ಶಕುಂತಲೆಯನ್ನು ಕೊಡಬೇಕೆಂದು ಇದ್ದ ಕಣ್ವರ ಉದ್ದೇಶವನ್ನು ತಿಳಿಸುವುದರ ಮೂಲಕ ಆಕೆಯು ದುಷ್ಯಂತನ ಅನುರಾಗಾಭಿ

ನ್ವಧ್ಧಿಗೆ ಮತ್ತಷ್ಟು ಅವಕಾಶವನ್ನುಂಟುಮಾಡಿರುವಳು. ಶಕುಂತಲೆಯನ್ನು ಕುರಿತು ಪ್ರಶ್ನೆಯನ್ನು ಕೇಳಲು ದುಷ್ಯಂತನನ್ನು ಪ್ರೋತ್ಸಾಹಿಸುವಳು. ಶಕುಂತಲೆಯು ಹುಸಿಮುನಿಸಿನಿಂದ ದುಷ್ಯಂತನ ಸನ್ನಿಧಿಯನ್ನು ಬಿಟ್ಟು ಹೊರಟುಹೋಗಲು ಯತ್ನಿಸಿದಾಗ, ವೃಕ್ಷಗಳಿಗೆ ಎರಡು ಸಲ ನೀರೆರೆಯುವ ಸಾಲ ಹೊತ್ತಿದ್ದುದನ್ನು ಶಕುಂತಲೆಗೆ ಜ್ಞಾಪಿಸಿ ಆಕೆಯು ಅಲ್ಲಿಂದ ಕದಲದಂತೆ ಮಾಡಿರುವವಳೂ ಪ್ರಿಯಂವದೆಯೇ. ಮದನಲೇಖನೋಪಾಯವು ತೋಚಿದುದೂ ಪ್ರಿಯಂವದೆಗೇ. ಅದನ್ನು ದುಷ್ಯಂತನು ತಿರಸ್ಕರಿಸಬಹುದೆಂದು ಶಕುಂತಲೆಯು ನಡುಗುತ್ತಿದ್ದಾಗ ಶರೀರತಾಪವನ್ನು ಶಾಂತಪಡಿಸುವ ಶರತ್ಕಾಲದ ಚಂದ್ರಿಕೆಯನ್ನು ವಸ್ತ್ರಾಂಚಲದಿಂದ ನಿವಾರಿಸುವುದು ಹೇಗೆ ಅಸಂಭವವೋ ಅವಳ ಪ್ರಣಯಪತ್ರಿಕೆಯನ್ನು ದುಷ್ಯಂತನು ತಿರಸ್ಕರಿಸುವುದೂ ಅಸಂಭವವೆಂದು ಆಕೆಯು ಶಕುಂತಲೆಗೆ ಧೈರ್ಯ ಹೇಳಿರುವಳು. ಪ್ರಿಯಂವದೆಯೇ ಪತ್ರಲೇಖನ ಸಾಮಗ್ರಿಗಳನ್ನು ಕ್ಷಣಮಾತ್ರದಲ್ಲಿ ತೋರಿಸಿಕೊಟ್ಟಿರುವಳು. ನಾಯಿಕಾನಾಯಕರಿಗೆ ಸಮಾಗಮವನ್ನುಂಟುಮಾಡಲು ವಿಪನ್ನರಕ್ಷಣವು ರಾಜಧರ್ಮವೆಂದು ದುಷ್ಯಂತನಿಗೆ ತಿಳಿಸುವುದರ ಮೂಲಕ ಆಕೆಯೇ ಉಪಾಯವಾಗಿ ಕಾರ್ಯವನ್ನು ಸಾಧನೆ ಮಾಡಿರುವಳು. ಜಿಂಕೆಯಮರಿಯ ನೆವವು ತೋರಿಬರುವುದೂ ಪ್ರಿಯಂವದೆಗೇ.

**ಶಾರ್ಙ್ಗರವ ಶಾರದ್ವತರು** – ಶಾರ್ಙ್ಗರವನು ಕಣ್ವಋಷಿಗಳ ಮುಖ್ಯ ಶಿಷ್ಯನು. ಆದುದರಿಂದಲೇ ಶಕುಂತಲೆಯನ್ನು ಪತಿಗೃಹಕ್ಕೆ ಬಿಟ್ಟುಬರುವ ಕಾರ್ಯವನ್ನು ಅವನಿಗೆ ಕಣ್ವರು ಒಪ್ಪಿಸಿರುವರು. ರಾಜನಿಗೆ ಸಂದೇಶವನ್ನು ಕಳುಹಿಸಿದುದೂ ಶಾರ್ಙ್ಗರವನ ಮೂಲಕವಾಗಿಯೇ; ರಾಜನೊಡನೆ ಹೆಚ್ಚಾಗಿ ಮಾತನಾಡಿರುವವನೂ ಈತನೇ. ಶಾರ್ಙ್ಗರವನು ನಿಷ್ಠುರವಾದಿ. ಚಕ್ರವರ್ತಿಯನ್ನೂ ಸಹ ಲಕ್ಷಿಸನು; ತನ್ನ ಗುರುಗಳನ್ನೂ ಸಹ "ಅನಭಿಜ್ಞರು" ಎಂದು ಕರೆಯಲು ಆತನು ಹಿಂದೆಗೆದಿಲ್ಲ. ಶಕುಂತಲೆಯನ್ನು ಕುರಿತು "ಆತ್ಮಕೃತವಾದ ಚಾಪಲ್ಯವು ಬಹಳವಾಗಿ ದಹಿಸುವುದು" ಎಂದು ಗರ್ಜಿಸಿರುವನು. ಪುರಜನರ ವಿಷಯದಲ್ಲಿ ಶಾರ್ಙ್ಗರವನಿಗೆ ಅನಾದರವು ಕಂಡುಬರುವುದು.

ಶಾರದ್ವತನು ಶಾರ್ಙ್ಗರವನಿಗಿಂತಲೂ ಕಡಿಮೆಯಾದ ಪ್ರಾಮುಖ್ಯ ವುಳ್ಳವನು. ಸುಖಾಸಕ್ತರಾದ ಪಟ್ಟಣಿಗರ ವಿಷಯದಲ್ಲಿ ಈತನಿಗೆ ಅನು ಕಂಪವು ಕಂಡುಬರುವುದು. ಈತನು ಮಿತವಾದಿ; ಕಾರ್ಯಜ್ಞನು. ಶಾರ್ಙ್ಗರವನು ಗುರುಗಳನ್ನೂ ಸಹ ಗೌರವಿಸದೆ ಮಾತನಾಡುತ್ತಿದ್ದಾಗ, ಅವನನ್ನು ತಡೆದು ಶಕುಂತಲೆಯನ್ನು ಕುರಿತು ದುಷ್ಯಂತನಿಗೆ ನಂಬಿಕೆ ಯನ್ನುಂಟುಮಾಡುವಂತೆ ಸಮಾಧಾನ ಹೇಳೆಂದು ಆಕೆಗೆ ತಿಳಿಸಿರುವನು. ಶಾರ್ಙ್ಗರವನು ದುಷ್ಯಂತನೊಡನೆ ಪುನಃ ವಾದಕ್ಕೆ ತೊಡಗುತ್ತಿದ್ದಾಗ "ಶಾರ್ಙ್ಗರವ! ಉತ್ತರದಿಂದೇನು? ಗುರುಗಳ ಆಜ್ಞೆಯನ್ನು ನೆರವೇರಿಸಿ ದಂತಾಯಿತು. ನಾವು ಹಿಂದಿರುಗೋಣ" ಎಂದು ಹೇಳಿ ರಾಜನಿಗೂ ಗೌತಮಿಗೂ ಉಚಿತವಾದ ಮಾತುಗಳನ್ನು ಹೇಳಿ ಕಾರ್ಯವನ್ನು ಮುಗಿಸಲು ಯತ್ನಿಸುವನು.

**ಮಾಢವ್ಯ** - ಇವನು ವಿದೂಷಕನು. ವೇಷಭಾಷಾದಿಗಳ ಮೂ ಲಕ ನಾಟಕದಲ್ಲಿ ಹಾಸ್ಯರಸವನ್ನು ಉತ್ಪಾದನಮಾಡುವುದು ವಿದೂಷಕನ ಪಾತ್ರದಿಂದ ಆಗುವ ಒಂದು ಪ್ರಯೋಜನ. ನಾಯಕನ ವಿಷಯದಲ್ಲಿ ನಾಯಕಿಯ ಮನೋಭಾವಗಳು ಸಖಿಯರ ಮೂಲಕವಾಗಿ ಪಾಠಕ ಪ್ರೇಕ್ಷಕರಿಗೆ ಸ್ಪಷ್ಟವಾಗುವ ಹಾಗೆ, ನಾಯಕಿಯ ವಿಷಯದಲ್ಲಿರುವ ನಾಯಕನ ಮನೋಭಾವಗಳೂ ವಿದೂಷಕನ ಮೂಲಕ ಗೋಚರವಾಗು ವುದು ಮತ್ತೊಂದು ಪ್ರಯೋಜನ. ಆದರೆ ಶಾಕುಂತಲ ನಾಟಕದಲ್ಲಿ ನಾಯಿಕಾ ನಾಯಕರ ಸಮಾಗಮಕ್ಕೆ ವಿದೂಷಕನ ಮೂಲಕ ಆಗಿರುವ ಸಹಾಯವು "ಮಾಳವಿಕಾಗ್ನಿಮಿತ್ರ", "ರತ್ನಾವಳಿ"ಗಳಲ್ಲಿ ಆಗಿರುವುದ ಕ್ಕಿಂತ ಕಡಿಮೆ. ವಿದೂಷಕನು ಪರಸ್ಪರ ವಿರುದ್ಧವಾದ ಕಾರ್ಯಗಳ ಮತ್ತು ಮಾತುಗಳ ಮೂಲಕವಾಗಿಯೂ, ತನ್ನ ಕುಕ್ಷಿಂಭರಿತ್ವ ಸ್ವಭಾವ ದಿಂದಲೂ ವಿಕಾರವಾದ ವೇಷಾಭಿನಯಗಳಿಂದಲೂ ನಗುವನ್ನುಂಟು ಮಾಡುವುದು ಈ ನಾಟಕದಲ್ಲಿ ಸಾಮಾನ್ಯವಾಗಿ ಕಂಡುಬರುವುದು. ಮಾಢವ್ಯನು ಒಂದು ಕ್ಷಣದಲ್ಲಿ ರಾಕ್ಷಸರ ಸುದ್ದಿಯಿಂದ ಹೆದರಿರುವನು; ಆದರೆ ಇದಾದ ಸ್ವಲ್ಪ ಹೊತ್ತಿನಲ್ಲಿಯೇ ತನಗೆ ರಾಕ್ಷಸರ ಭಯವೇ ಇಲ್ಲ ವೆಂದು ಜಂಬಹೊಡೆಯುವನು. ದುಷ್ಯಂತನಿಗೆ ಆಗುತ್ತಿದ್ದ ಮನ್ಮಥನ

ಬಾಧೆಯನ್ನು ತಪ್ಪಿಸುವುದಕ್ಕಾಗಿ ಮನ್ಮಥನ ಬಾಣಗಳಲ್ಲಿ ಒಂದಾದ ಚೂತಕಲಿಕೆಗಳನ್ನು ತನ್ನ ದಂಡಕಾಷ್ಠದಿಂದ ಉದುರಿಸಿಬಿಡುವನು!. 'ಅನಾಯಾಸಕಾರ್ಯವೆಂದರೆ ಕಡುಬನ್ನು ತಿನ್ನುವುದು' ಎಂದೇ ಇವನ ಅಭಿಪ್ರಾಯವು ದುಷ್ಯಂತನು ಶಕುಂತಲೆಯನ್ನು ನಿರಾಕರಿಸಿದುದರಿಂದ ಪಶ್ಚಾತ್ತಾಪಪಡುತ್ತಾ ದುಃಖಾತಿಶಯದಿಂದ ಉಂಗುರವನ್ನು ದೂಷಿಸುತ್ತಿದ್ದಾಗ, ವಿದೂಷಕನಿಗೆ ಹೊಟ್ಟೆಯ ಯೋಚನೆಯು ಕಿತ್ತುತಿನ್ನುತ್ತಿರುವುದು!. ಹಸಿವು ಬಾಯಾರಿಕೆಗಳನ್ನು ಮರೆತು ದುಷ್ಯಂತನು ಉತ್ಸಾಹದಿಂದ ಬೇಟೆಯಾಡುತ್ತಿದ್ದಾಗ, ವಿದೂಷಕನಿಗೆ ಹೊತ್ತುಹೊತ್ತಿಗೆ ತಕ್ಕ ಊಟ ಸಿಕ್ಕಲಿಲ್ಲವಲ್ಲಾ! ಚೆನ್ನಾಗಿ ನಿದ್ದೆಮಾಡಲು ಅವಕಾಶವಿಲ್ಲವಲ್ಲಾ! ಎಂಬ ಯೋಚನೆಯು ಪೀಡಿಸುತ್ತಿರುವುದು. ಸೇನಾಪತಿಯು ದುಷ್ಯಂತನ ಬೇಟೆಯನ್ನು ಶ್ಲಾಘಿಸುತ್ತಿದ್ದಾಗ, ವಿದೂಷಕನು, ಬೇಟೆಯು ನಿಂತರೆ ಆದೀತಲ್ಲಾ ಎಂದು ಯೋಚಿಸುತ್ತಾ, ಸೇನಾಪತಿಯ ಉದ್ದೇಶವನ್ನು ಅಡ್ಡಿಪಡಿಸುತ್ತಿರುವನು. ಮಾತಲಿಯ ಕೈಗೆ ಸಿಕ್ಕಿಬಿದ್ದಾಗ ವಿದೂಷಕನು ತತ್ತರಿಸುವುದೂ ತಕ್ಕಮಟ್ಟಿಗೆ ವಿನೋದಕರವಾಗಿರುವುದು. ಅದರೂ ಒಟ್ಟಿನಲ್ಲಿ ಶಾಕುಂತಲದ ವಿದೂಷಕನಿಂದ ಹಾಸ್ಯರಸವು ಅಷ್ಟು ಪ್ರವೃದ್ಧವಾಗಿರುವುದೆಂದು ಹೇಳಲಾಗುವುದಿಲ್ಲ.

**ಸಾನುಮತಿ**.—ಈಕೆಯು ಮೇನಕೆಯ ಸಖಿ. ದುಷ್ಯಂತನು ಶಕುಂತಲೆಯನ್ನು ಪರಿತ್ಯಜಿಸಿದ ಬಳಿಕ ಈಕೆಯು ಸಾಕ್ಷಾತ್ತಾಗಿ ಭೂಲೋಕಕ್ಕೆ ಬಂದು ದುಷ್ಯಂತನ ಗಾಢವಾದ ಅನುರಾಗವನ್ನೂ, ಅಪಾರವಾದ ಪಶ್ಚಾತ್ತಾಪವನ್ನೂ ಕಂಡು ಆ ವಿಷಯಗಳನ್ನು ಮೇನಕಾಶಕುಂತಲೆಯರಿಗೆ ತಿಳಿಸುವಳು. ಶಕುಂತಲೆಯು ಅದೃಶ್ಯಳಾದ ಬಳಿಕ ಆಕೆಯ ವಿಚಾರವು ಪಾಠಕ ಪ್ರೇಕ್ಷಕ ವೃಂದಕ್ಕೆ ತಿಳಿಯಲು ಈ ಪಾತ್ರದಿಂದ ಬಹಳ ಪ್ರಯೋಜನವಾಗಿರುವುದು.

## ೮. ನಾಲ್ಕನೆಯ ಅಂಕದ ಪ್ರಶಸ್ತ್ಯ

ಕಾವ್ಯೇಷು ನಾಟಕಂ ರಮ್ಯಂ । ತತ್ರ ರಮ್ಯಾ ಶಕುಂತಲಾ ॥
ತತ್ರಾಪಿ ಚ ಚತುರ್ಥೋಽಂಕಃ । ತತ್ರ ಶ್ಲೋಕಚತುಷ್ಟಯಂ ॥ —

ಎಂದರೆ, ಕಾವ್ಯಗಳಲ್ಲಿ ನಾಟಕವು ರಮ್ಯವಾದುದು; ಅವುಗಳಲ್ಲಿ ಶಾಕುಂತಲವು ರಮ್ಯವಾದುದು; ಅದರಲ್ಲೂ ನಾಲ್ಕನೆಯ ಅಂಕವೂ, ಆ ನಾಲ್ಕನೆಯ ಅಂಕದಲ್ಲೂ ನಾಲ್ಕು ಶ್ಲೋಕಗಳು ರಮ್ಯವಾದುವು— ಎಂಬ ಅಭಿಪ್ರಾಯವು ಬಹಳ ಪ್ರಚಾರದಲ್ಲಿರುವುದು. ನಾಲ್ಕನೆಯ ಅಂಕಕ್ಕೆ ಹೀಗೆ ಪ್ರಾಮುಖ್ಯವುಂಟಾಗಿರುವುದಕ್ಕೆ ಅದರಲ್ಲಿ ಕಂಡುಬರುವ ತಪೋವನದ ನಡೆವಳಿಕೆಗಳ ವರ್ಣನೆಗಳೂ, ಹೆಣ್ಣುಮಗಳನ್ನು ಗಂಡನ ಮನೆಗೆ ಕಳುಹಿಸುವ ಸಂದರ್ಭದಲ್ಲಿ ಹುಟ್ಟುವ ಮನೋಭಾವಗಳನ್ನು ಕುರಿತ ವರ್ಣನೆಗಳೂ, ನೀತಿಬೋಧನೆಯೂ ಕಾರಣಗಳೆಂದು ಹೇಳಬಹುದು. ಈ ಅಂಕದ ವರ್ಣನೆಗಳನ್ನು ಓದಿದರೆ, ಅಥವಾ ಅದರ ಅಭಿನಯವನ್ನು ನೋಡಿದರೆ, ಸಂಗತಿಗಳೆಲ್ಲವೂ ನಮ್ಮ ಕಣ್ಣಿದಿರಿಗೇ ನಡೆಯುತ್ತಿರುವಂತೆ ತೋರುವುವು. ಈ ಅಂಕದಲ್ಲಿರುವ ರಮ್ಯವಾದ ಪದ್ಯಗಳನ್ನು ಕುರಿತು ಅಲ್ಲಲ್ಲಿ ಭಿನ್ನಾಭಿಪ್ರಾಯಗಳು ಕಂಡುಬರುವುವು. ಆದರೂ ಈ ಮುಂದೆ ಕೊಟ್ಟಿರುವ ಶ್ಲೋಕಗಳನ್ನು ಅನೇಕರು ಮೆಚ್ಚಿಕೊಂಡಿರುವರು:—

೧. ಯಾಸ್ಯತ್ಯದ್ಯ ಶಕುಂತಲೇತಿ ಹೃದಯಂ
  ಸಂಸ್ಪೃಷ್ಟಮುತ್ಕಂಠಯಾ ।
ಕಂಠಃ ಸ್ತಂಭಿತಬಾಷ್ಪವೃತ್ತಿಕಲುಷ-
  ಶ್ಚಿಂತಾ ಜಡಂ ದರ್ಶನಂ ॥
ವೈಕ್ಲವ್ಯಂ ಮಮ ತಾವದೀದೃಶಮಿದಂ
  ಸ್ನೇಹಾದರಣ್ಯೌಕಸಃ ।
ಪೀಡ್ಯಂತೇ ಗೃಹಿಣಃ ಕಥಂ ನ ತನಯಾ-
  ವಿಶ್ಲೇಷದುಃಖೈರ್ನವೈಃ ॥

೨. ಪಾತುಂ ನ ಪ್ರಥಮಂ ವ್ಯವಸ್ಯತಿ ಜಲಂ
  ಯುಷ್ಮಾಸ್ವಪೀತೇಷು ಯಾ ।

ನಾದತ್ತೇ ಪ್ರಿಯಮಂಡನಾಪಿ ಭವತಾಂ
ಸ್ನೇಹೇನ ಯಾ ಪಲ್ಲವಂ ॥
ಆದ್ಯೇ ವಃ ಕುಸುಮಪ್ರಸೂತಿಸಮಯೇ
ಯಸ್ಯಾ ಭವತ್ಯುತ್ಸವಃ ।
ಸೇಯಂ ಯಾತಿ ಶಕುಂತಲಾ ಪತಿಗೃಹಂ
ಸರ್ವೈರನುಜ್ಞಾಯತಾಂ ॥

೩. ಅಸ್ಮಾನ್ ಸಾಧು ವಿಚಿಂತ್ಯ ಸಂಯಮಧನಾ—
ನುಚ್ಚೈಃಕುಲಂ ಚಾತ್ಮನಃ ।
ತ್ವಯ್ಯಸ್ಯಾಃ ಕಥಮಪ್ಯಬಾಂಧವಕೃತಾಂ
ಸ್ನೇಹಪ್ರವೃತ್ತಿಂ ಚ ತಾಂ ॥
ಸಾಮಾನ್ಯಪ್ರತಿಪತ್ತಿಪೂರ್ವಕಮಿಯಂ
ದಾರೇಷು ದೃಶ್ಯಾ ತ್ವಯಾ ।
ಭಾಗ್ಯಾಯತ್ತಮತಃ ಪರಂ ನ ಖಲು
ತದ್ವಾಚ್ಯಂ ವಧೂಬಂಧುಭಿಃ ॥

೪. ಶುಶ್ರೂಷಸ್ವ ಗುರೂನ್ಕುರು ಪ್ರಿಯಸಖೀ—
ವೃತ್ತಿಂ ಸಪತ್ನೀಜನೇ ।
ಭರ್ತುರ್ವಿಪ್ರಕೃತಾಪಿ ರೋಷಣತಯಾ
ಮಾಸ್ಮ ಪ್ರತೀಪಂ ಗಮಃ ॥
ಭೂಯಿಷ್ಠಂ ಭವ ದಕ್ಷಿಣಾ ಪರಿಜನೇ
ಭಾಗ್ಯೇಷ್ವನುತ್ಸೇಕಿನೀ ।
ಯಾಂತ್ಯೇವಂ ಗೃಹಿಣೀಪದಂ ಯುವತಯೋ
ವಾಮಾಃ ಕುಲಸ್ಯಾಧಯಃ ॥

ಈ ಮೇಲಿನ ನಾಲ್ಕು ಶ್ಲೋಕಗಳನ್ನು ಅಭಿನವಕಾಳಿದಾಸ ಬಸಪ್ಪಶಾಸ್ತ್ರಿಗಳು ತಮ್ಮ ಕನ್ನಡ ಶಾಕುಂತಲದಲ್ಲಿ ಹೀಗೆ ಅಂದವಾಗಿ ಅನುವಾದಿಸಿದ್ದಾರೆ:—

೧. ಕಳವಳವಾಂತುದೆನ್ನೆರ್ದೆ* ಶಕುಂತಳೆ
ಪೋದಪಳೆಂದು ಕಂಠಮು ।
ಮ್ಮಳಿಸುವುದೊತ್ತುವಶ್ರು ಭರದಿಂ ಜಡ-
ಮಾದುದು ದೃಷ್ಟಿ ಚಿಂತೆಯಿಂ ॥
ದಟಿಲಿನಿತಾಗೆ ಕಾಡ ಮನುಜಂಗೆನಗಂ
ಕಡುನೇಹದಿಂದಮಿ ।
ನ್ನುಟಿದ ಗೃಹಸ್ಥರಾತ್ಮಭವೆಯಂ
ಕಳುಪುತ್ತಕಟೆಂತಟಿಲ್ಪರೋ ॥

೨. ಜಲವನದಾವಳೀಂಟಳೆಱಿದಲ್ಲದೆ
ನಿಮ್ಮಯ ಪಾತೆಗಂಬುವಂ ।
ತಳಿರ್ಗ*ಳ ಕೊಯ್ಯಳಾವಳೊಲವಿಂ
ಮಿಗೆ ಸಿಂಗರದಾಸೆಯುಳ್ಳೊಡಂ ॥
ಅಲರ್ಗ*ಳ ತಾಳೆ ನೀವು ಮೊದಲು-
ತ್ಸವವಾಂತಪಳಾವಳಾ ಶಕುಂ ।
ತಳೆ ಪತಿಸದ್ಮಕೈದಿದಪಳಾಕೆ-
ಗನುಜ್ಞೆಯನೀವುದೆಲ್ಲರುಂ ॥

೩. ಪಿರಿದುಂ ಚಿಂತಿಸಿ ಸಂಯಮಾರ್ಥ-
ರೆನಿಪೆಮ್ಮಂ ಮೇಣ್ ಭವದ್ವಂಶದೆ ।
ಟ್ಮಿರಮಂ ನಿನ್ನೊಳಗೀಕೆ ತಾನೆಯೊಲವೆತ್ತಾ-
ಪಾಂಗುಮಂ ಪೆಂಡಿರೊಳ್ ॥
ಸರಿಗಂಡೀಕೆಯ ನೀಂ ಬರ್ದು*ಂಕಿಪುದು
ಭಾಗ್ಯಾಧೀನಮಿನ್ನಿಂತಱಿಂ ।
ಪೆಱತೆಲ್ಲಂ ಬಗೆಯಲ್ಕದಂ ನುಡಿವುದಲ್ಲಂ-
ದಲ್ ವಧೂ ಬಂಧುಗಳ್ ॥

೨. ಹಿರಿಯರ ಸೇವೆಗೆಯ್ ಸವತಿಯರ್ಗೆ ಕೆಳ-
ಳಿಷ್ಟವಯಸ್ಯೆಯಂದದಿಂ ।
ದಿರು ಪತಿಯೊರ್ವೆ ಹೇವಗೊಳಿಸಲ್
ಮುಳಿಸಿಂ ಪ್ರತಿಕೂಲೆಯಾಗದಿರ್ ॥
ಪರಿಜನವಂ ಕರಂ ಸಲಹು ಭಾಗ್ಯದೆ
ಬಾಗಿರು ಪೆಣ್ಗಳಿಂತಿರಲ್ ।
ಗರತಿಯರಪ್ಪರಿಂತಿರದರನ್ವಯಕಾಧಿ-
ಯನುಂಟುಮಾಳ್ಪರಾ ॥

## ೯. ಕಾಳಿದಾಸನ ಉಪಮಾನಗಳಿಗೆ ಉಂಟಾಗಿರುವ ಪ್ರಶಸ್ತಿ

"ಉಪಮಾ ಕಾಳಿದಾಸಸ್ಯ"; ಎಂದರೆ ಕಾಳಿದಾಸನ ಉಪಮಾನಗಳು ಬಹಳ ಮನೋಹರವಾದುವು ಎಂದು ಪ್ರಸಿದ್ಧವಾಗಿರುವುದು. (ಉಪಮಾ-ಎಂದರೆ ಉಪಮಾಲಂಕಾರಮೂಲವಾದ ಅಲಂಕಾರಗಳು ಎಂದು ಇಲ್ಲಿಯ ಅಭಿಪ್ರಾಯವನ್ನು ಇಟ್ಟುಕೊಂಡರೆ ಹೃದಯಂಗಮವಾದ ಉದಾಹರಣೆಗಳು ಅನೇಕವಾಗಿ ದೊರೆಯಲು ಅವಕಾಶವಾಗುವುದು.) ಇತರ ಕವಿಗಳು ಪೂರ್ವದಿಂದಲೂ ಬಂದಿರುವ ಉಪಮಾನಗಳನ್ನೋ ಅಥವಾ ಕವಿಸಮಯದ ಆಧಾರದಿಂದ ಕಲ್ಪಿಸಿಕೊಂಡ ಉಪಮಾನಗಳನ್ನೋ ಪ್ರಯೋಗಿಸಿ ತಮ್ಮ ಪ್ರೌಢಿಯನ್ನು ತೋರಿಸಿಕೊಳ್ಳಲು ಯತ್ನಿಸುವುದೇ ಬಹಳವಾಗಿ ಕಂಡು ಬರುವುದು. ಕಾಳಿದಾಸನ ಉಪಮಾನಗಳಿಗೆ ಪ್ರತಿದಿನದ ಅನುಭವದಲ್ಲಿ ಕಂಡುಬರುವ ಸಂಗತಿಗಳೂ ಪ್ರಕೃತಿಗೆ ಸಂಬಂಧಿಸಿದ ವಿಷಯಗಳೂ ಆಧಾರವಾಗಿರುವುವು. ಜಿಂಕೆಯ ಮೈಗೆ ಬಾಣವನ್ನು ಪ್ರಯೋಗಿಸುವುದನ್ನು ಕುರಿತು ವರ್ಣಿಸಬೇಕಾದರೆ ಮೃದುವಾದ ಹೂಗಳ ರಾಶಿಗೆ ಬೆಂಕಿಯನ್ನಿಡುವ ದೃಷ್ಟಾಂತವನ್ನು ಕವಿಯು ಕೊಟ್ಟಿರುವನು. [ಹೂಗಳ ರಾಶಿ (ಪುಷ್ಪರಾಶಿ) ಎಂಬುದರ ಬದಲಾಗಿ ಹತ್ತಿಯ

ರಾಶಿ (ತೂಲರಾಶಿ) ಎಂಬ ಪಾಠಾಂತರವೂ ಇದೆ.] ಅವ್ಯಾಜಮನೋಹರ ವಾದ ಶರೀರವುಳ್ಳ ಶಕುಂತಲೆಯನ್ನು ತಪಶ್ಚರಣಕ್ಕಾಗಿ ನೇಮಿಸಿರು ವುದಕ್ಕೆ, ಕುವಲಯದಳದಿಂದ ಶಮೀಲತೆಯನ್ನು ಕತ್ತರಿಸುವ ಪ್ರಯ ತ್ನದ ದೃಷ್ಟಾಂತವನ್ನು ಕವಿಯು ಕೊಟ್ಟಿರುವನು. ವಲ್ಕಲವನ್ನು ಧರಿಸಿದ ಕೋಮಲ ಶರೀರಳಾದ ಶಕುಂತಲೆಗೆ, ಪಾಚಿಯು ಆವರಿಸಿಕೊಂಡ ತಾವ ರೆಯ ಹೂವನ್ನು ಹೋಲಿಸಿರುವನು. ಶರೀರವು ಒಂದು ವಿಷಯಕ್ಕೆ ದೂರ ದೂರವಾಗಿ ಹೋಗುತ್ತಿರಲು ಮನಸ್ಸು ಮಾತ್ರ ಆ ವಿಷಯದಲ್ಲಿ ಆಸಕ್ತವಾಗಿರುವುದಕ್ಕೆ, ವೇಗವಾಗಿ ಮುಂದು ಮುಂದಕ್ಕೆ ಚಲಿಸುತ್ತಿ ರುವ ಧ್ವಜಸ್ತಂಭದ ಮತ್ತು ಹಿಂದುಹಿಂದಕ್ಕೆ ಚಲಿಸುತ್ತಲಿರುವ ಅದರ ಚೀನಾಂಶುಕದ ದೃಷ್ಟಾಂತವನ್ನು ಕೊಟ್ಟಿರುವನು; ತಾವರೆಯ ಎಲೆಯ ಮೃದುತ್ವವನ್ನು ವರ್ಣಿಸುವುದಕ್ಕೆ ಗಿಳಿಯ ಹೊಟ್ಟೆಯ ಸಾಮ್ಯವನ್ನು ಕೊಟ್ಟಿರುವನು. ಹೀಗೆಯೇ ಈ ಕವಿಯು ಅನೇಕ ಕಡೆಗಳಲ್ಲಿ ಕೊಟ್ಟಿ ರುವ ಹೋಲಿಕೆಗಳಿಂದ ವರ್ಣಿತ ವಿಷಯವು ಮನಸ್ಸಿಗೆ ನೆಟ್ಟನೆ ಹೊಕ್ಕು ಮನಃಫಲಕದ ಮೇಲೆ ಸ್ಪಷ್ಟವಾಗಿ ಚಿತ್ರಿತವಾಗುವ ಕಾರಣ "ಉಪಮಾ ಕಾಳಿದಾಸಸ್ಯ" ಎಂಬ ಪ್ರತೀತಿಯು ಉಂಟಾಗಿರುವುದು ಉಚಿತವಾ ಗಿಯೇ ಇರುವುದು.

**ಕಾಳಿದಾಸನ ವರ್ಣನೆಗಳ ಪ್ರಾಶಸ್ತ್ಯ.**—ಶ್ರಾವ್ಯಕಾವ್ಯಗಳಲ್ಲಿ ವರ್ಣನೆಗೆ ಇರುವಷ್ಟು ಅವಕಾಶವು ದೃಶ್ಯಕಾವ್ಯಗಳಲ್ಲಿ ಕವಿಗಳಿಗೆ ದೊರೆ ಯಲಾರದು. ಒಂದುವೇಳೆ ದೃಶ್ಯಕಾವ್ಯದ ಕವಿಯು ವರ್ಣನಾಚಾಪ ಲ್ಯಕ್ಕೆ ಒಳಗಾಗಿ ಅಜಾಗರೂಕತೆಯಿಂದ ವರ್ಣನೆ ಮಾಡತೊಡಗಿದರೆ ರಸಜ್ಞರು ಅವನನ್ನು ಅಭಿನಂದಿಸಲಾರರು. ಭಟ್ಟನಾರಾಯಣ ಕವಿಯು ಸುಂದರಕನ ಮೂಲಕವಾಗಿ ಯುದ್ಧವರ್ಣನೆಗೆ ಪ್ರವರ್ತಿಸಿರುವುದು ಪ್ರಾಚೀನಾರ್ವಾಚೀನ ವಿದ್ಯಾವಂತರೆಲ್ಲರಿಗೂ ಅಸಮ್ಮತವಾಗಿರುವುದು. ಕಾಳಿದಾಸನು ಈ ನಾಟಕದಲ್ಲಿ ಎರಡು ತಪೋವನಗಳ ವೃತ್ತಾಂತವನ್ನು ಸಂಯೋಜಿಸಿರುವನು; ಆದರೂ ಅವುಗಳ ವರ್ಣನೆಯೆಲ್ಲವೂ ಒಂದೇ ಕಡೆಯೇ ಸಿಕ್ಕಿದಂತೆ ಅದನ್ನು ಬಹಳ ಚಮತ್ಕಾರವಾಗಿ ಕೊಟ್ಟಿರುವನು. ಶ್ರಾವ್ಯ ಕಾವ್ಯಗಳಲ್ಲಿ ಕೊಟ್ಟಿರುವ ತಪೋವನವನ್ನು ಕುರಿತು ಒಂದೆರಡು

ಅಧ್ಯಾಯಗಳನ್ನು ಓದಿದರೂ ಶಾಕುಂತಲದಲ್ಲಿ ಕಂಡುಬರುವ ದೃಶ್ಯದಷ್ಟು ಸ್ಪಷ್ಟವಾದ ಚಿತ್ರವು ಮನಃಫಲಕದಲ್ಲಿ ಮೂಡಲಾರದು.

ಕಣ್ವಾಶ್ರಮವು ಮಾಲಿನೀ ತೀರದಲ್ಲಿರುವುದು. ಅದರ ತೀರದಲ್ಲಿರುವ ಮರಳುದಿಣ್ಣೆಗಳಲ್ಲಿ ಹಂಸಮಿಥುನಗಳು ವಿಶ್ರಮಿಸಿಕೊಳ್ಳುತ್ತಲಿರುವುವು. ಅಲ್ಲಲ್ಲಿ ಹಿಮಾಲಯಕ್ಕೆ ಸೇರಿದ ಗುಡ್ಡಗಳು ಮನೋಹರವಾಗಿ ಶೋಭಿಸುತ್ತಿರುವುವು. ನದಿಯಿಂದ ಹೊರಟಿರುವ ಕಾಲುವೆಗಳಲ್ಲಿ ಜಳಜಳನೆ ಹರಿಯುತ್ತಿರುವ ನೀರು ವೃಕ್ಷಗಳ ಬೇರುಗಳನ್ನು ತೊಳೆಯುತ್ತ ಮುಂದುಮುಂದಕ್ಕೆ ಹೋಗುತ್ತಲಿರುವುದು. ಅಲ್ಲಲ್ಲಿ ಗಿಡಗಳ ಪಾತೆಗಳ ಬಳಿಯಲ್ಲಿ ಸ್ನಿಗ್ಧವಾದ ಜಗುಲಿಗಳು ಕಟ್ಟಿರುವುವು.

ಈ ಆಶ್ರಮದಲ್ಲಿ ಕುಲಪತಿಗಳಾದ ಕಣ್ವಮಹರ್ಷಿಗಳು ವಾಸಿಸುತ್ತಲಿರುವರು. ಅವರ ಯಾಜಮಾನ್ಯಕ್ಕೆ ಒಳಪಟ್ಟು ಅನೇಕ ಋಷಿಗಳೂ, ವೈಖಾನಸರೇ ಮೊದಲಾದ ವ್ರತಿಗಳೂ, ಋಷಿಶಿಷ್ಯರೂ, ಋಷಿಪುತ್ರರೂ, ತಾಪಸ ಸ್ತ್ರೀಯರೂ, ಬಾಲಿಕೆಯರೂ ಬಹಳ ಶಾಂತವೃತ್ತಿಯಿಂದ ಪರ್ಣಶಾಲೆಗಳಲ್ಲಿ ಜೀವಿಸುತ್ತಿರುವರು. ಆ ತಪೋವನದ ಶಾಂತಿಯು ಅತಿ ಮನೋಹರವಾಗಿರುವುದು. ಅಲ್ಲಿಯ ಮೃಗಪಕ್ಷಿಗಳಿಗೆ ಬಾಧೆಯೆಂಬುದು ಗೊತ್ತೇಯಿಲ್ಲ. ಆದುದರಿಂದ ದುಷ್ಯಂತನ ರಥವು ಅಲ್ಲಿ ಸುಳಿದಾಡಿದರೂ ಜಿಂಕೆಗಳೂ ಅವುಗಳ ಮರಿಗಳೂ ನಿಶ್ಶಂಕೆಯಿಂದ ಉಪವನಭೂಮಿಯಲ್ಲಿ ತಿರುಗುತ್ತಿರುವುವು. ಒಂದು ಮರದ ಕೆಳಗೆ ಒಂದು ಹೆಣ್ಣು ಜಿಂಕೆಯು ನಿಂತು ಗಂಡುಜಿಂಕೆಯ ಕೊಂಬಿನಿಂದ ತನ್ನ ಕಣ್ಣಿನ ನವೆಯನ್ನು ಹೋಗಲಾಡಿಸಿಕೊಳ್ಳುತ್ತಲಿರವುದು. ಅನೇಕ ಪಕ್ಷಿಗಳು ಮರಗಳ ಪೊಟರೆಗಳಲ್ಲಿ ತಮ್ಮ ಮರಿಗಳನ್ನು ಪೋಷಿಸುತ್ತ ಸುಖವಾಗಿ ಇದ್ದುಕೊಂಡಿರುವುವು. ತಾಯಿಹಕ್ಕಿಗಳು ತಂದುಕೊಡುವ ಗುಟುಕನ್ನು ತೆಗೆದುಕೊಳ್ಳಲು ಪುಟ್ಟ ಮರಿಗಳು ಗೂಡಿನ ಬಾಗಿಲಿಗೆ ಏಕಕಾಲದಲ್ಲಿ ನುಗ್ಗಿಬರುವುದರಿಂದ ಗುಟುಕಿನ ಸ್ವಲ್ಪಭಾಗವು ನೆಲದ ಮೇಲೆ ಉದುರಿಹೋಗಿರುವುದು ಕಂಡುಬರುವುದು.

ಒಂದು ಕಡೆ, ತಪೋವನ ನಿವಾಸಿಗಳು ಸ್ನಾನಕ್ಕಾಗಿ ಇಂಗುದಿಯ ಕಾಯಿಗಳನ್ನು ಜಜ್ಜಿ ಅರೆದಿರುವುದರಿಂದ ನುಣ್ಣಗಾಗಿರುವ ಕಲ್ಲುಗಳು

ಕಂಡುಬರುತ್ತಿರುವುವು. ಇನ್ನೊಂದು ಕಡೆ, ಋಷಿಸ್ತ್ರೀಯರು ಕಾಲಕಾಲ ಗಳಲ್ಲಿ ಜಲಾಶಯಗಳಿಗೆ ಹೋಗಿ ಸ್ನಾನಮಾಡಿಕೊಂಡು ನೀರನ್ನು ಹಿಂಡದ ಒದ್ದೆಯ ಬಟ್ಟೆಗಳನ್ನೇ ಉಟ್ಟುಕೊಂಡು ತಮ್ಮ ತಮ್ಮ ಪರ್ಣಶಾಲೆ ಗಳಿಗೆ ಹೋಗಿರುವುದನ್ನು ಆ ಬಟ್ಟೆಗಳಿಂದ ತೊಟ್ಟಿಕ್ಕಿದ ನೀರಿನ ಗೆರೆ ಗಳು ಸೂಚಿಸುತ್ತಿರುವುವು. ಮತ್ತೊಂದು ಕಡೆ, ಆಶ್ರಮದ ಗಿಡಗಳಿಗೆ ಒಣಗಕಟ್ಟಿರುವ ವಲ್ಕಲಗಳು ಕಂಡುಬರುತ್ತಿರುವುವು. ಮಗುದೊಂದು ಕಡೆಯಲ್ಲಿ, ಹೊಗೆಯಿಂದ ಬೇರೆ ಬಣ್ಣವಾಗಿರುವ ಗಿಡಗಳ ಚಿಗುರುಗಳ್ನು ತಪೋವನದಲ್ಲಿ ಅನೇಕವಾಗಿ ನಡೆಯುತ್ತಿರುವ ಹವನ ಹೋಮಗಳನು ಸೂಚಿಸುತ್ತಿರುವುವು. ಅರ್ಧಾರ್ಧವಾಗಿ ಕತ್ತರಿಸಿದ ದರ್ಭೆಗಳುಳ್ಳ ಉಪ ವನ ಪ್ರದೇಶವನ್ನು ನೋಡಿದರೂ, ತಪಸ್ವಿಗಳ ಕರ್ಮನಿಷ್ಠೆಯು ಚೆನ್ನಾಗಿ ತಿಳಿದುಬರುವುದು. ಕೆಲವರು ವೈಖಾನಸರು ಸಮಿತ್ತುಗಳನ್ನು ತರುವುದ ಕ್ಕಾಗಿ ಹೋಗುತ್ತಲಿರುವರು.

ಒಂದು ಪ್ರದೇಶದಲ್ಲಿ ಕೆಲವರು ತಾಪಸ ಕನ್ಯೆಯರು ಆಶ್ರಮದ ತರುಲತೆಗಳಿಗೆ ನೀರನ್ನು ಎರೆಯುತ್ತಿರುವರು. ಸರ್ವಭೂತದಯಾಪರ ರಾದ ತಪಸ್ವಿಗಳ ಪೋಷಣೆಯಲ್ಲಿರುವ ಆ ಕನ್ನೆಯರಿಗೆ ಆ ಗಿಡಮರ ಬಳ್ಳಿಗಳಲ್ಲಿ ಸೋದರಪ್ರೇಮವಿರುವುದು. ಆದುದರಿಂದಲೇ ಅವರು ತಮ್ಮ ಕೋಮಲ ಶರೀರಗಳಿಗೆ ಶ್ರಮವಾದರೂ ಅದನ್ನೂ ಲಕ್ಷಿಸದೆ ಒಬ್ಬರೊಡನೆ ಒಬ್ಬರು ಸ್ಪರ್ಧೆಮಾಡುತ್ತಾ ಅವುಗಳಿಗೆ ಆದರದಿಂದ ನೀರ ನ್ನೆರೆಯುವರು. ಜಿಂಕೆಯ ಮರಿಗಳಿಗೆ ಮಾತೃವಿಯೋಗವಾದರೆ ಅವು ಗಳನ್ನು ಅತ್ಯಂತ ಕರುಣದಿಂದ ಪೋಷಿಸುವರು. ತಾಯಿಯನ್ನು ಬಿಟ್ಟು ಅಗಲಿದ ಜಿಂಕೆಯ ಮರಿಗಳನ್ನು ಅವುಗಳ ತಾಯಿಗಳ ಬಳಿಯನ್ನು ಸೇರಿಸುವರು. ಇವರಿಗೆ ಅಲಂಕಾರದ ವಿಷಯದಲ್ಲಿ ಆಸಕ್ತಿಯಿದ್ದರೂ ಚಿಗುರು ಹೂಗಳನ್ನು ಕೊಯ್ದರೆ ವನಸ್ಪತಿಗಳಿಗೆ ಎಲ್ಲಿ ಬಾಧೆಯಾದೀ ತೋ ಎಂಬ ಹೆದರಿಕೆಯಿಂದ ಹಿಂದೆಗೆಯುವರು. ಮಹಾಮಹಿಮರಾದ ಕಣ್ವರು ಇಚ್ಛಾಮಾತ್ರದಿಂದ ಅನರ್ಘ ರತ್ನಾಭರಣಗಳನ್ನೂ ದಿವ್ಯ ದು ಕೂಲಗಳನ್ನೂ ನಿರ್ಮಿಸಲು ಶಕ್ತರಾಗಿದ್ದರೂ, ತಪೋವನದಲ್ಲಿದ್ದ ಸ್ತ್ರೀ ಯರಿಗೆ ಇಂತಹ ಭೋಗಸಾಮಗ್ರಿಗಳ ಮೇಲೆ ಆಸೆಯೇ ಇಲ್ಲ. ಅವರ

ಅಲಂಕಾರಸಾಧನಗಳು ಆಶ್ರಮಸುಲಭವಾದ ತೀರ್ಥಮೃತ್ತಿಕೆ, ಗರಿಕೆಯಕುಡಿ, ಕೇಸರಮಾಲಿಕೆ–ಇಂತಹ ಪದಾರ್ಥಗಳು! ಆದರೂ ತಪೋವನವಾಸಿಗಳಲ್ಲೆಲ್ಲಾ ಶಾಂತಿಯು ತುಂಬಿ ಉಕ್ಕುತ್ತಲಿರುವುದು!

ಮಾರೀಚಾಶ್ರಮದ ವರ್ಣನೆಯು ಮತ್ತೂ ಅದ್ಭುತವಾಗಿರುವುದು. ಆದರೆ ಗ್ರಂಥವಿಸ್ತರಭೀತಿಯಿಂದ ಅದನ್ನು ಇಲ್ಲಿ ಕೊಟ್ಟಿಲ್ಲ.

## ೧೦. ಶಾಕುಂತಲ ನಾಟಕದಿಂದ ತೋರಿಬರುವ ನೀತಿಗಳು

ಕಾಂತಾಸಮ್ಮಿತವರ್ಗಕ್ಕೆ ಸೇರಿದ ಉತ್ತಮವಾದ ಗ್ರಂಥಗಳಿಂದ ಪಾಠಕರಿಗೆ ವಿನೋದ ಮಾತ್ರವಲ್ಲದೆ ಸದಸದ್ವಿವೇಕ ಜ್ಞಾನವೂ ದೊರೆಯುವುದು. ಶಾಕುಂತಲವನ್ನು ಓದಿದರೂ, ಕೇಳಿದರೂ, ಅಥವಾ ಅದರ ಅಭಿನಯವನ್ನು ನೋಡಿದರೂ ಅತ್ಯಂತ ಆನಂದವುಂಟಾಗುವುದು ಮಾತ್ರವಲ್ಲದೆ, ಮನನಶೀಲರಾದ ಸಹೃದಯರಿಗೂ ಸಾಧಾರಣ ಪಾಠಕ ಪ್ರೇಕ್ಷಕ ವೃಂದಕ್ಕೂ ಕೆಲವು ನೀತಿಗಳು ಕವಿಯಿಂದ ಬೋಧಿತವಾಗಿರುವಂತೆ ಭಾಸವಾಗುವುದು. ಇವುಗಳಲ್ಲಿ ಕೆಲವನ್ನು ಮಾತ್ರ ಈ ಮುಂದೆ ಸೂಚಿಸಿದೆ.

ಮೊದಲು ಪ್ರತ್ಯಕ್ಷವಾಗಿ ಬೋಧಿತವಾಗಿರುವ ನೀತಿಗಳನ್ನು ಕುರಿತು ಆಲೋಚಿಸೋಣ. ಶಕುಂತಲೆಯು ಪತಿಗೃಹಕ್ಕೆ ಹೋಗುವಾಗ ಕಣ್ವಮಹರ್ಷಿಗಳು ಆಕೆಗೆ ಹೇಳಿರುವ ಬುದ್ಧಿವಾದವು ಸಕಲ ಸಾಧ್ವೀಮಣಿಗಳಿಗೂ ಪರಿಗ್ರಾಹ್ಯವಾಗಿರುವುದು. ಕಾಳಿದಾಸನು ಕಣ್ವರಿಂದ ಹೇಳಿಸಿರುವ ಈ ಬುದ್ಧಿವಾದವು ಪಾಶ್ಚಾತ್ಯ ವಾಙ್ಮಯ ನಭೋಂಗಣದಲ್ಲಿ ಬೆಳಗುತ್ತಲಿರುವ ಷೇಕ್ಸ್ಪಿಯರ್ ಮಹಾಕವಿಯು ತನ್ನ "ಹ್ಯಾಮ್ಲೆಟ್" ನಾಟಕದಲ್ಲಿ ಪೊಲೋನಿಯಸನಿಂದ ಲೆಯರ್ಟಿಸನಿಗೆ ಹೇಳಿಸಿರುವ ಬುದ್ಧಿವಾದದಂತೆ ಉತ್ಕೃಷ್ಟವಾಗಿರುವುದು. ಸತಿಯರು ತಮ್ಮ ತಮ್ಮ ಪತಿಗಳಿಗೆ ಪ್ರಿಯರಾಗಿದ್ದರೂ ಅಪ್ರಿಯರಾಗಿದ್ದರೂ ಅವರ ಸೇವೆಯಲ್ಲಿ ಇದ್ದುಕೊಂಡಿರುವುದು ಸರಿಯೇ ಹೊರತು ತೌರುಮನೆಗಳಲ್ಲಿ ಇದ್ದುಕೊಂಡಿರುವುದು ತಕ್ಕುದಲ್ಲವೆಂದು ಬೋಧಿತವಾಗಿರುವುದು.

ಇಂತಹ ಪ್ರತ್ಯಕ್ಷ ಬೋಧನೆಗಳು ಮತ್ತೆ ಒಂದೆರಡು ಕಡೆಗಳಲ್ಲಿ ಕಂಡು ಬಂದರೂ ಕವಿಯು ಪರೋಕ್ಷವಾಗಿ ಮಾಡಿರುವ ಹಿತೋಪದೇಶವೇ ಈ ನಾಟಕದಲ್ಲಿ ಹೆಚ್ಚಾಗಿ ಕಂಡುಬರುವುದು.

ಅಲ್ಪ ಜಂತುಗಳಾದ ಭ್ರಮರಸ್ತ್ರೀಯರಲ್ಲಿ ಪತಿಭಕ್ತಿಪ್ರೇಮಗಳು ತುಂಬಿರುವುವು; ಆದುದರಿಂದ ಶ್ರೇಷ್ಠಜನ್ಮವನ್ನು ಪಡೆದಿರುವ ಮಾನವ ಸ್ತ್ರೀಯರಲ್ಲಿ ಮತ್ತೆಷ್ಟುಮಟ್ಟಿಗೆ ಇರಬೇಕೆಂಬುದು ಕೈಮುತಿಕನ್ಯಾಯ ದಿಂದ ಪರೋಕ್ಷವಾಗಿ ಬೋಧಿತವಾಗಿರುವುದು. ಅದಿತಿದೇವಿಯು ಮಹರ್ಷಿ ಪತ್ನಿಯರೊಡನೆ ಪತಿವ್ರತಾಧರ್ಮವನ್ನು ಕೇಳುವಳೆಂಬ ಪ್ರಸಂಗದಿಂದ ಎಷ್ಟೇ ಉನ್ನತಪದವಿಯಲ್ಲಿರುವ ಸ್ತ್ರೀಯರೂ ಪತಿವ್ರತಾ ಧರ್ಮವನ್ನು ಮತ್ತೆ ಮತ್ತೆ ಕೇಳಿ ಅದರಂತೆ ನಡೆದುಕೊಳ್ಳುವುದು ಆವಶ್ಯಕವೆಂದು ಚೆನ್ನಾಗಿ ಬೋಧಿತವಾಗಿರುವುದು.

ರಾಜಧರ್ಮವು ಬಹಳ ಚೆನ್ನಾಗಿ ಈ ಗ್ರಂಥದಲ್ಲಿ ಬೋಧಿತವಾಗಿ ರುವುದು. ಈ ವಿಷಯವನ್ನು ದುಷ್ಯಂತನ ಸ್ವಭಾವವರ್ಣನೆಯ ಪ್ರಸಂಗ ದಲ್ಲಿ ಹೇಳಿರುವುದು. ಪಿತೃಗಳ ವಿಷಯದಲ್ಲಿ ರಾಜಾಧಿರಾಜರಾದವರೂ ತೋರಿಸಬೇಕಾದ ಭಕ್ತಿಯನ್ನು, ದುಷ್ಯಂತನು ಅನಪತ್ಯತೆಗಾಗಿ ಶೋಕಿ ಸುವ ವೃತ್ತಾಂತವನ್ನು ವರ್ಣಿಸುವ ಸಂದರ್ಭದಲ್ಲಿ ಕವಿಯು ಸೂಚಿಸಿ ರುವನು. ಮಕ್ಕಳ ವಿಷಯದಲ್ಲಿ ಮಾತಾಪಿತೃಗಳಿಗೆ ಎಂತಹ ವಾತ್ಸ ಲ್ಯವಿರಬೇಕೆಂಬ ವಿಷಯವು ನಾಟಕದ ಏಳನೆಯ ಅಂಕದಿಂದ ಊಹ್ಯ ವಾಗಿರುವುದು. ಗೃಹಸ್ಥಾಶ್ರಮದಲ್ಲಿದ್ದರೂ ಶಾಸ್ತ್ರೋಕ್ತರೀತಿಯಿಂದ ಆ ಆಶ್ರಮಧರ್ಮಗಳಂತೆ ನಡೆದುಕೊಂಡರೆ ಅದೂ ತಪಸ್ಸಿಗೆ ಸಮಾನವೆಂದು ಋಷಿಪುತ್ರರ ಮಾತುಗಳಿಂದ ಸೂಚಿತವಾಗಿರುವುದು.

ಯಜ್ಞಯಾಗಾದಿ ಕರ್ಮಗಳಿಂದ ಉಪಯೋಗವಿಲ್ಲ; ದೇವರು ಪ್ರತ್ಯಕ್ಷನಾಗಿ ಕಾಣುವುದಿಲ್ಲವಾದುದರಿಂದ ಆ ವಿಷಯದಲ್ಲಿ ನಂಬಿಕೆಯು ಸಲ್ಲದು—ಇತ್ಯಾದಿಯಾದ ಬೌದ್ಧಮತದ ಬೋಧನೆಗಳನ್ನು ಕವಿಯು ಋಷ್ಯಾಶ್ರಮದ ಮನೋಹರನಾದ ವರ್ಣನೆಯ ಮೂಲಕವೂ, ಅಷ್ಟ ಮೂರ್ತಿ ಸ್ವರೂಪನಾದ ಮತ್ತು ಎಲ್ಲೆಲ್ಲೂ ಪ್ರಕಟವಾಗಿರುವ ಮಹಾತ್ಮ್ಯೆ ಯುಳ್ಳ ಈಶ್ವರನನ್ನು ಸ್ತೋತ್ರಮಾಡುವುದರ ಮೂಲಕವೂ ಖಂಡಿಸಿರು

ವನು. ಐಹಿಕವಾದ ಎಷ್ಟೇ ಭೋಗಭಾಗ್ಯಗಳಿದ್ದರೂ ಪ್ರಾಣಿಯು ಕೃತಾರ್ಥತೆಯನ್ನು ಪಡೆದಂತಾಗುವುದಿಲ್ಲವೆಂದೂ, ಪುನರ್ಜನ್ಮರಾಹಿತ್ಯವಾದ ಮೋಕ್ಷವನ್ನು ಪಡೆಯುವುದೇ ಜನ್ಮಸಾರ್ಥಕ್ಯಕ್ಕೆ ಮಾರ್ಗವೆಂದೂ ಕವಿಯು ಬೋಧಿಸಿರುವನು.

ವಿಚಾರಮಾಡಿಕೊಂಡು ಹೋದರೆ ಇನ್ನೂ ಅನೇಕವಾದ ಬೋಧನೆಗಳು ಈ ಗ್ರಂಥದಲ್ಲಿ ಕಂಡುಬರುವುವು. ಕಾಳಿದಾಸನ ಕೋಮಲಭಾವ ವರ್ಣನೆ, ಅಪಾರ ಪ್ರತಿಭೆ, ಮಾನವ ಸ್ವಭಾವಜ್ಞಾನ—ಇವೇ ಮೊದಲಾದ ಹಲವು ವಿಷಯುಗಳನ್ನೂ, ನಾಟಕದ ರಸ, ರೀತಿ ಮುಂತಾದ ವಿಷಯಗಳನ್ನೂ ಕುರಿತು ವಿವರಿಸಬೇಕಾದುದು ಬಹಳವಾಗಿರುವುದು. ಆದರೆ ಈಗಾಗಲೇ ಈ ಉಪನ್ಯಾಸವು ಬಹಳ ದೊಡ್ಡದಾಗಿದೆಯೆಂದು ನಮ್ಮ ಮಿತ್ರರಲ್ಲಿ ಕೆಲವರು ಸೂಚಿಸುತ್ತಿರುವುದರಿಂದ ವಿದ್ವನ್ಮಂಡಲಿಯಲ್ಲಿ ಬಹಳ ಪ್ರಚಾರದಲ್ಲಿರುವ ಈ ಶ್ಲೋಕವನ್ನು ಅನುವದಿಸಿ ಈ ಉಪನ್ಯಾಸವನ್ನು ಇಲ್ಲಿಗೆ ವಿರಮಿಸುವೆನು.

ಕಾಳಿದಾಸಗಿರಾಂ ಸಾರಂ ಕಾಳಿದಾಸಃ ಸರಸ್ವತೀ ।
ಚತುರ್ಮುಖೋಥವಾ ಸಾಕ್ಷಾತ್ ವಿದುರ್ನಾನ್ಯೇತು ಮಾದೃಶಾಃ ॥

---

ಈ ಉಪನ್ಯಾಸವನ್ನು ಅನೇಕ ಗ್ರಂಥಗಳ ಸಹಾಯದಿಂದ ಸಿದ್ಧಪಡಿಸಲಾಗಿರುವುದು. ಇವುಗಳಲ್ಲಿ ಮುಖ್ಯವಾದುವು—ಪ್ರೊ. ಶಾರದಾ ರಂಜನರಾಯ್, ಎಂ.ಎ., ಪ್ರೊ. ಮಾನಿಯರ್ ವಿಲಿಯಂಸ್—ಇವರ ಶಾಕುಂತಲದ ಉಪೋದ್ಘಾತಗಳೂ, ಆಂಧ್ರ ವಿಜ್ಞಾನ ಸರ್ವಸ್ವಮು, ಮಿಥಿಕ್ ಸೊಸೈಟಿ ಕ್ವಾರ್ಟರ್‌ಲಿ, ಹಿಂದೂಸ್ಥಾನ್ ರಿವ್ಯೂ—ಇವುಗಳು. ಈ ಗ್ರಂಥಗಳ ಕರ್ತೃಗಳಿಗೂ ಪ್ರಚಾರಕರಿಗೂ ಬಹಳವಾಗಿ ಕೃತಜ್ಞನಾಗಿರುವೆನು.

**ಬಿ. ಕೃ.**

